# ಅಚಲ ತಿಂಗಳ ಪತ್ರಿಕೆ

ಜನವರಿ - 2004

ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 19 ಸಂಚಿಕೆ : 1

ಸಂಪಾದಕ ಮಂಡಲಿ
ಎನ್. ಗಾಯತ್ರಿ,
ನೇಮಿಚಂದ್ರ, ದೇವಿ,
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004


ಆತ್ಮೀಯರ,

## ಹೊಸವರ್ಷದ ಶುಭಾಶಯಗಳು

ಕಳೆದ 19 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ಬದಲಾಗಿದೆ

ವಾರ್ಷಿಕ ಚಂದಾ - ರೂ. 50/- (ವ್ಯಕ್ತಿಗಳಿಗೆ)
ರೂ. 100/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)


**ಅಚಲ ವಿಳಾಸ**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಸಂಪಾದಕೀಯ

## ಪುರುಷಾಹಂಕಾರದ ವಿಕೃತ ಮನಸ್ಸಿನ ಹೊಸರೂಪ - ಆ್ಯಸಿಡ್ ಎಸೆತ

ಹೆಣ್ಣಿನ ದೈಹಿಕ ಸೌಂದರ್ಯವೇ ಸಮಾಜದಲ್ಲಿ ಅವಳ ಸ್ಥಾನಮಾನವನ್ನು ನಿರ್ಧರಿಸುವ ದುರವಸ್ಥೆಯ ಪರಿಸ್ಥಿತಿ ಇನ್ನೂ ನಮ್ಮ ಸಮಾಜದಿಂದ ದೂರವಾಗಿಲ್ಲ. ಹೆಣ್ಣನ್ನು ಪುರುಷನ ಆಸ್ತಿಯೆಂದು ಭಾವಿಸುವ ಸಮಾಜದಲ್ಲಿಯಂತೂ ಅವಳ ಸೌಂದರ್ಯ ಯಾರಿಗಾಗಿ ಎಂಬುದನ್ನು ನಿರ್ಧರಿಸುವುದೂ ಅವಳ ಪುರುಷ ಸಂಬಂಧಿಗಳೇ ಆಗಿರುತ್ತಾರೆ. ಶತಮಾನದ ಆದಿಯಲ್ಲಿ ಹೆಣ್ಣು ಗಂಡ ಸತ್ತ ನಂತರ ಕುರೂಪಗೊಳ್ಳಬೇಕಾದ ಮತ್ತು ಇಲ್ಲವೆ ಪ್ರಾಣವನ್ನೇ ತ್ಯಜಿಸಬೇಕಾದ ದುರವಸ್ಥೆಯಿದ್ದು ಈ ಸಾಮಾಜಿಕ ಸಮಸ್ಯೆ ಅಂದಿನ ಸಮಾಜ ಸುಧಾರಕರ ದೃಷ್ಟಿಯಲ್ಲಿ ಆತಂಕವನ್ನೇ ಹುಟ್ಟಿಸಿತು. ಕೇಶ ಸೌಂದರ್ಯ ಹೆಣ್ಣಿನ ವ್ಯಕ್ತಿತ್ವದ ಒಂದು ಭಾಗ. ಅದನ್ನೇ ಕತ್ತರಿಸಿ ಹಾಕಿದರೆ ಅವಳನ್ನು ಯಾವ ಪುರುಷನೂ ಮುಟ್ಟದಂತಿರಲಿ, ಎಂಬುದು ಸಂಪ್ರದಾಯಸ್ಥರ ನಂಬಿಕೆಯಾಗಿರಬೇಕು. ಗಂಡ ಸತ್ತ ನಂತರ ಅನಾಥ ಭಾವನೆಯಿಂದ ನರಳುತ್ತಿದ್ದ ಹೆಣ್ಣು ಆ ಗಾಯದ ಮೇಲೆ ಬರೆಯಿಟ್ಟಂತೆ ಕೂದಲನ್ನು ಕತ್ತರಿಸಿಕೊಳ್ಳಬೇಕಿದ್ದರೆ ಎಂತಹ ನರಕಯಾತನೆ ಅನುಭವಿಸಿರಬೇಕಿತ್ತು ಎಂಬುದನ್ನು ಮನುಷ್ಯತ್ವವಿದ್ದರು ಮಾತ್ರ ಊಹಿಸಿಕೊಳ್ಳಬಲ್ಲರು.

ಕೇಶಮುಂಡನದಂತಹ ಸಮಸ್ಯೆ ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಒಂದು ನಿರ್ದಿಷ್ಟ ಸಮುದಾಯದಲ್ಲಿ ಮಾತ್ರ ಪ್ರಚಲಿತವಿತ್ತು ಎನ್ನುವುದಾದರೆ ಇಂದು ಹೆಣ್ಣನ್ನು ಕುರೂಪಗೊಳಿಸುವ ಅತ್ಯಂತ ಕ್ರೂರ ಕ್ರಮವೊಂದು ಎಲ್ಲ ಜಾತಿ ಮತಗಳ, ವರ್ಗಭೇದವಿಲ್ಲದೆ ಮಹಿಳೆಯರಿಗೆ ಶಾಪವಾಗಿ ಕಾಡುತ್ತಿದೆ. ಆಧುನಿಕ ಜಗತ್ತಿನ ಪುರುಷಾಹಂಕಾರದ ವಿಕೃತ ಮನಸ್ಸಿನ ವಿರಾಟ ಸ್ವರೂಪವಾಗಿ ಇಂದು ಆ್ಯಸಿಡ್ ಎಸೆತ ಹೆಂಗೆಳೆಯರ ಮನಸ್ಸಿನಲ್ಲಿ ಭೂತವಾಗಿ ಕಾಡುತ್ತಿದೆ. ವಿದ್ಯಾಭ್ಯಾಸ, ಉದ್ಯೋಗಕ್ಕೆಂದು ಹೊರಗೆ ಕಾಲಿಟ್ಟ ಮಹಿಳೆ ಬೀದಿಕಾಮಣ್ಣನ ಇಲ್ಲವೆ ಸಹಪಾಠಿಯ / ಸಹೋದ್ಯೋಗಿಯ ಪ್ರೀತಿ, ಪ್ರೇಮಕ್ಕೆ ಮಣಿಯದಿದ್ದರೆ ಆ್ಯಸಿಡ್ ದಾಳಿ ಶುರುವಾಗಬಹುದು. ಕುಟುಂಬದ ಹೊರಗಿನ ಪುರುಷರಿರಲಿ, ಮನೆಯ ಒಳಗೆ ಗಂಡನ ಮಾತು ಕೇಳದ ಹೆಂಡತಿ, ವರದಕ್ಷಿಣೆ ತಾರದ ಹೆಂಡತಿಯೂ ಆ್ಯಸಿಡ್‌ದಾಳಿಗೆ ತುತ್ತಾಗಬಹುದು. ಲಿಂಗದೌರ್ಜನ್ಯದ ಹೊಸ ಸ್ವರೂಪವಾಗಿ ಕಾಣುವ ಈ ಆ್ಯಸಿಡ್ ಎಸೆತ ವೈಜ್ಞಾನಿಕತೆಯನ್ನು ದುರುಪಯೋಗಪಡಿಸಿಕೊಳ್ಳುವ ಪ್ರಯತ್ನವೂ ಹೌದು.

ಕಳೆದ ನಾಲ್ಕೈದು ವರ್ಷಗಳಲ್ಲಿ ನಮ್ಮ ರಾಜ್ಯದಲ್ಲೇ ಹತ್ತಕ್ಕಿಂತಲೂ ಹೆಚ್ಚು ಆ್ಯಸಿಡ್‌ದಾಳಿಗಳು ವರದಿಯಾಗಿದ್ದು ಇವು ಸಮಸ್ಯೆಯ ಗಂಭೀರತೆಯನ್ನು ಸೂಚಿಸುತ್ತದೆ. ವಿದ್ಯಾರ್ಥಿದೆಸೆಯಲ್ಲೇ ಇರುವ ತರುಣ ಯುವಕರು ತಮ್ಮ ಮಾತಿಗೆ ಬಗ್ಗದ ಹೆಣ್ಣು ಮಕ್ಕಳ ಮೇಲೆ ಆ್ಯಸಿಡ್ ಎಸೆದು, 'ನನಗೆ ಸಿಗದವಳು ಬೇರೆಯವರಿಗೂ ದಕ್ಕದಿರಲಿ' ಎಂಬ ಫ್ಯಾಸಿಸ್ಟ್ ಮನೋಭಾವ ತೋರಿಸುವ ಪ್ರಕರಣಗಳು ನಮ್ಮ ಮುಂದೆ ನಡೆದಿವೆ. ಹಾಗೆಯೇ ಹೆಂಡತಿಯ ಶೀಲವನ್ನು ಶಂಕಿಸುವ ಗಂಡಂದಿರು, ಹಣದ ದುರಾಸೆಯಿಂದಲೂ ಹೆಂಡತಿಯರು ಸತ್ತರೂ ಸರಿ, ಬದುಕಿದರೂ ಎಲ್ಲರಂತೆ ಜೀವನ ನಡೆಸಬಾರದು, ಎನ್ನುವ ಆಲೋಚನೆಯೊಂದಿಗೆ ಆ್ಯಸಿಡ್ ಬಳಸುವುದು ಕಂಡುಬರುತ್ತಿದೆ. ಆತಂಕಕಾರಿ ಬೆಳವಣಿಗೆಯೆಂದರೆ ಇಂತಹ ವಸ್ತುವನ್ನು ನಮ್ಮ ಮಾಧ್ಯಮಗಳು ಅತಿರಂಜಿತವಾಗಿ ಚಿತ್ರಿಸಿ ಬೇಜವಾಬ್ದಾರಿಯನ್ನು ತೋರುವುದು ಖಂಡನಾರ್ಹವಾದದ್ದು. ಟಿ.ವಿ. ಸೀರಿಯಲ್‌ಗಳಲ್ಲಿ ಚಿತ್ರಣಗೊಳ್ಳುವ ಇಂತಹ ಬೇಜವಾಬ್ದಾರಿ ಪ್ರಸಂಗಗಳು ಯುವಜನತೆಯ ಮೇಲೆ ದುಷ್ಪರಿಣಾಮಗಳು ಬೀರುತ್ತವೆ.

ಆ್ಯಸಿಡ್ ಎಸೆತದಿಂದ ಕುರೂಪಗೊಳ್ಳುವ ಮುಖ ಮತ್ತು ದೇಹ ಅತ್ಯಂತ ಯಾತನಾಮಯವಾಗಿರುವುದಲ್ಲದೆ, ಅದಕ್ಕೆ ತಗಲುವ ಔಷದಿ, ಖರ್ಚು ಯಾವ ಬಡ, ಮಧ್ಯಮವರ್ಗದ ಕೈಗೂ ಎಟುಕದಂತಹುದು. ಕುಟುಂಬದ ಮಂದಿ ಈ ಖರ್ಚನ್ನು ಭರಿಸಲಾಗದಾಗ ಇಂತಹ ಆ್ಯಸಿಡ್ ದಾಳಿಗೆ ತುತ್ತಾದ ಮಹಿಳೆಯನ್ನು ಕುಟುಂಬದ ಹೊರೆಯಾಗಿ ಕಾಣುವ ಸಾಧ್ಯತೆ ಇದೆ.

ಆ್ಯಸಿಡ್ ಎಸೆದ ಕೊಲೆಗಡುಕರಿಗೆ ತಕ್ಕ ಶಿಕ್ಷೆಯಾಗಿರುವ ಸಂದರ್ಭಗಳು ಬಲು ಕಡಿಮೆ. ಪೋಲೀಸ್ ಇಲಾಖೆ ಇಂತಹ ಅಪರಾಧಿಗಳನ್ನು ಶಿಕ್ಷಿಸುವಲ್ಲಿ ಹೆಚ್ಚಿನ ಮುತುವರ್ಜಿ ವಹಿಸಬೇಕು. ಸರ್ಕಾರವೂ ಕೂಡ ಆ್ಯಸಿಡ್ ಎಸೆತದಂತಹ ದುಷ್ಕೃತ್ಯದಿಂದ ಹತಭಾಗಿಯಾದವರಿಗೆ ಸಂಪೂರ್ಣ ಆರೋಗ್ಯದ ನೆರವು ನೀಡಿ ಅವರು ಬದುಕಲು ಪುನರ್ವಸತಿಯೊದಗಿಸುವ ಅಗತ್ಯವಿದೆ. ಇದೆಲ್ಲದರ ಜೊತೆಗೆ ಆ್ಯಸಿಡ್ ಎಸೆಯುವಂತಹ ಕ್ರಿಮಿನಲ್ ಬುದ್ದಿಯನ್ನು ತೊಲಗಿಸಬೇಕಾದ ಸಾಮಾಜಿಕ ತಿಳುವಳಿಕೆ, ಜಾಗೃತಿಯ ಪ್ರಸರಣಕ್ಕೆ ಮನುಷ್ಯತ್ವವಿರುವವರೆಲ್ಲಾ ಮುಂದಾಬೇಕು.

- ಎನ್. ಗಾಯತ್ರಿ

# 'ಲಿಂಗದೌರ್ಜನ್ಯದ ಹೊಸ ಆಯುಧ - ಆ್ಯಸಿಡ್'

- ಹೇಮಲತಾ ಮಹಿಷಿ

ಮಹಿಳೆಯರನ್ನು ಹತ್ತಿಕ್ಕಲು ಅವರ ಚೈತನ್ಯವನ್ನು ಆತ್ಮಶಕ್ತಿಯನ್ನು ಉಡುಗಿಸಿ ಸದಾಕಾಲ ಅವರು ಪುರುಷರ ಕೈಗೊಂಬೆಗಳಾಗಿರಲು, ನೆರಳಾಗಿರುವಂತೆ ನೋಡಿಕೊಳ್ಳಲು ಇತಿಹಾಸದ ಆರಂಭಕಾಲದಿಂದಲೂ ಅನೇಕ ರೀತಿಯ ಹಿಂಸಾತ್ಮಕ ವಿಧಾನಗಳನ್ನು ಬಳಸಲಾಗುತ್ತಿದೆ. ಕೌಟುಂಬಿಕ ಹಿಂಸೆ ಮನೆಯ ಒಳಗಿನ ದಮನದ ಅಸ್ತ್ರವಾದರೆ, ಅತ್ಯಾಚಾರ, ಲೈಂಗಿಕ ಕಿರುಕುಳ ಮನೆಯ ಹೊರಗಿನ ಅಸ್ತ್ರವಾಗಿದೆ. ಇವು ಮಹಿಳೆಯ ಮಾನಸಿಕ-ದೈಹಿಕ ಬಲವನ್ನು, ಆರೋಗ್ಯವನ್ನು ಕುಗ್ಗಿಸಿ ಅವಳನ್ನು ದುರ್ಬಲಳನ್ನಾಗಿ ಮಾಡುತ್ತವೆ, ಅನ್ಯಾಯವನ್ನು ತನ್ನ ಮೇಲಾಗುವ ದೌರ್ಜನ್ಯವನ್ನು ಪ್ರಶ್ನಿಸುವ, ಎದುರಿಸುವ, ವಿರೋಧಿಸುವ, ಪ್ರತಿಭಟಿಸುವ ಅವಳ ಸ್ವಾಭಿಮಾನ - ಧೈರ್ಯವನ್ನು ನಾಶಪಡಿಸುತ್ತವೆ. ಪುರುಷ ಬಯಸುವುದು ಇಂತಹ ಸ್ವಾಭಿಮಾನ ರಹಿತ, ದುರ್ಬಲ ಮಹಿಳೆಯನ್ನು.

ಮಹಿಳೆಯನ್ನು ಹತ್ತಿಕ್ಕುವ ಘನಕಾರ್ಯದಲ್ಲಿ ಈವರೆಗೆ ಅನೇಕ ಹಿಂಸಾ ವಿಧಾನಗಳನ್ನು ಅನುಸರಿಸಲಾಗುತ್ತಿದೆ. ಸತಿಪದ್ಧತಿ ಒಂದು ವಿಧಾನವೆಂದರೆ ವಿಧವೆಯ ಪಟ್ಟ, ಕೇಶಮುಂಡನ ಇನ್ನೊಂದು, ಹೆಂಡತಿಯನ್ನು ಗಂಡ ಹೊಡೆಯುವುದನ್ನು, ಹೆಂಡತಿಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಅಗತ್ಯಕ್ರಮವಾಗಿ ಸಮಾಜ ತಲತಲಾಂತರದಿಂದ ಒಪ್ಪಿಕೊಂಡಿದೆ. ಹೆಂಡತಿಯೂ ಅದನ್ನು ಗಂಡನ ಅಧಿಕಾರ ಎಂದು ಒಪ್ಪಿಕೊಳ್ಳುವಂತೆ ಮಾಡಿರುವುದು ಒಂದು ವಿಪರ್ಯಾಸ. ವರದಕ್ಷಿಣೆಗಾಗಿ ಹಿಂಸಿಸುವುದೂ ಒಂದು ಸಾಮಾಜಿಕ ಪದ್ಧತಿಯಾಗಿ ನಡೆದುಕೊಂಡು ಬಂದಿದೆ.

ಇತ್ತೀಚಿನ ದಿನಗಳಲ್ಲಿ ವರದಕ್ಷಿಣೆಗಾಗಿ ಹಿಂಸಿಸುವುದು ಭೀಕರರೂಪ ತಾಳಿ ವರದಕ್ಷಿಣೆ ಸಾವಿನಲ್ಲಿ ಪರ್ಯವಸಾನಗೊಂಡಿದೆ. ಬೆಂಕಿ ಹಚ್ಚಿ ಕೊಲ್ಲುವುದು, ಅವಳು ಆತ್ಮಹತ್ಯೆ ಮಾಡಿಕೊಳ್ಳುವಂತೆ ಮಾಡುವುದು ದೇಶದ ಎಲ್ಲೆಡೆ ಕಂಡುಬರುತ್ತಿರುವ ಜನಪ್ರಿಯ ಚಟುವಟಿಕೆಯಾಗಿದೆ ! ಸಮಾಜಕ್ಕೆ ಆ ಬಗ್ಗೆ ನಾಚಿಕೆಯಾಗಲೀ, ಅವಮಾನವಾಗಲೀ ಕಿಂಚಿತ್ತೂ ಇಲ್ಲದಿರುವ ನಮ್ಮ ಸಮಾಜ ತಲುಪಿರುವ ಅಧೋಗತಿಯನ್ನು ಸೂಚಿಸುತ್ತದೆ.

ಇತ್ತೀಚೆಗೆ ಮಹಿಳೆಯರ ಮೇಲಿನ ಹಿಂಸೆಯ ಹೊಸ ರೂಪವಾಗಿ ಆಸಿಡ್ ದಾಳಿಯು ಅಸ್ತಿತ್ವಕ್ಕೆ ಬರುತ್ತಿದೆ. ಪ್ರಯೋಗಶಾಲೆಗಳಲ್ಲಿ, ಅಂಗಡಿಗಳಲ್ಲಿ ದಿನನಿತ್ಯ ಬಳಸುವ ಆಸಿಡನ್ನು ಇಂತಹ ಅಮಾನವೀಯಕಾರ್ಯಕ್ಕೆ ಬಳಸಿಕೊಳ್ಳಬಹುದೆಂದು ಮೊದಲು ಯೋಚಿಸಿದ, ಯೋಜಿಸಿದ ತಲೆ ನಿಜಕ್ಕೂ ಯಾವ ಕ್ರಿಮಿನಲ್‌ನದೋ ತಿಳಿಯದು. ಕೆಟ್ಟ ವಿಚಾರಗಳಲ್ಲಿ ಮಾನವನ ಬುದ್ಧಿಮತ್ತೆಗೆ ಎಲ್ಲೆಯೇ ಇಲ್ಲ! ಕಳೆದ ನಾಲ್ಕು ವರ್ಷಗಳಲ್ಲಿ ಬೆಂಗಳೂರು, ಮೈಸೂರುಗಳಲ್ಲಿ 10ಕ್ಕಿಂತಲೂ ಹೆಚ್ಚು ತೀವ್ರ ಆಸಿಡ್ ಧಾಳಿಯ ಪ್ರಕರಣಗಳು ವರದಿಯಾಗಿವೆ. ಆಗದಿರುವುದು ಎಷ್ಟಿವೆಯೋ! ಆಗೊಮ್ಮೆ - ಈಗೊಮ್ಮೆ ಪತ್ರಿಕೆಗಳಲ್ಲಿ ವರದಿಯಾದಾಗ ಮಾತ್ರ ಸ್ವಲ್ಪ ಕಾಲ ಜನರ ಗಮನ ಸೆಳೆಯುವ ಈ ಪ್ರಕರಣಗಳು ಅದರ ಹಿಂದಿರುವ ಭೀಕರತೆಯನ್ನು ದುರಂತತೆಯನ್ನು ಸಂಪೂರ್ಣವಾಗಿ ನಮ್ಮ ಮುಂದೆ ಬಿಚ್ಚಿಡುವುದಿಲ್ಲ. ಹತ್ತಿರ ಹೋದಾಗಷ್ಟೆ ಅದರ ಸಂಪೂರ್ಣ ವಿಕೃತತೆ, ಭೀಕರತೆ, ದುರಂತತೆ ತನ್ನ ಎಲ್ಲಾ ಆವರಣಗಳನ್ನು ಕಳಚಿಕೊಂಡು ನಗ್ನಸತ್ಯವಾಗಿ ಕಣ್ಣಮುಂದೆ ನಿಂತು ನಮ್ಮನ್ನು ಬೆಚ್ಚಿಸುತ್ತದೆ, ಎಚ್ಚರಿಸುತ್ತದೆ. ಲಿಂಗ ದೌರ್ಜನ್ಯದಭಾಗವಾಗಿ ಈ ಪ್ರಕರಣಗಳು ಹೆಚ್ಚುತ್ತಿರುವುದು ನಿಚ್ಚಳವಾಗುತ್ತಿದೆ.

ಹಾಗಾಗಿಯೇ ಮಹಿಳಾ ಜಾಗೃತಿ ಸಂಸ್ಥೆ 2000ದಲ್ಲಿ ನಡೆದ ನೂರ್‌ಜಹಾನ್ ಪ್ರಕರಣವನ್ನು ಕೈಗೆತ್ತಿಕೊಂಡು ಅದರ ಹಿನ್ನೆಲೆಯನ್ನು ಬೆನ್ನಟ್ಟಿದಾಗ ಅವರಿಗೆ ಈ ಸಮಸ್ಯೆಯ ತೀವ್ರತೆ ಅರಿವಾಯಿತು. 2001-2002ರಲ್ಲಿಯೂ ಇನ್ನೂ ಹಲವಾರು ಘಟನೆಗಳು ನಡೆದ ಬಗ್ಗೆ ವರದಿಗಳು ಬಂದವು. 2002ರ ಶೃತಿ ಪ್ರಕರಣವಂತೂ ಇಡೀ ರಾಜ್ಯದಲ್ಲಿ ಜನರ ಮನಕಲಕಿತು. ಒಂದರ ಹಿಂದೆ ಒಂದರಂತೆ ನಡೆಯತೊಡಗಿದ ಈ ದೌರ್ಜನ್ಯಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ಅದಕ್ಕೆ ಬಲಿಯಾಗಿರುವ ಮಹಿಳೆಯರಿಗೆ ಬೆಂಬಲವಾಗಿ ನಿಲ್ಲಲು, ಇದರ ಬಗ್ಗೆ ಸರ್ಕಾರದ - ಸಮಾಜದ ಗಮನ ಸೆಳೆದು ಈ ಘೋರಕೃತ್ಯ ನಿಲ್ಲುವಂತೆ ಮಾಡಲು ಮಹಿಳಾ ಜಾಗೃತಿ, ಪೆಡಸ್ಟ್ರಿಯನ್ ಪಿಕ್ಚರ್ಸ್ (ಸ್ವತಂತ್ರಮಾಧ್ಯಮ ಕಾರ್ಯಕರ್ತರ ತಂಡ) ಹಾಗೂ ಈ ಕುರಿತು ಕಾಳಜಿ ಹೊಂದಿರುವ ಪತ್ರಕರ್ತೆಯರು, ಅಧ್ಯಾಪಕಿಯರು, ಕಾರ್ಯಕರ್ತೆಯರು ಸೇರಿಕೊಂಡು ಈ ಬಗ್ಗೆ ಪ್ರಚಾರಾಂದೋಲನ ಮತ್ತು ಹೋರಾಟವನ್ನು ರೂಪಿಸಿಕೊಂಡರು. ತಮ್ಮ ಸತ್ಯಶೋಧನಾ ತಂಡಗಳನ್ನು ಗದಗ, ಬಾಗಲಕೋಟೆ, ಬೀದರ್, ರಾಯಚೂರು, ಸಿರಸಿ, ಹೊನ್ನಾವರ, ಚಿಕ್ಕಮಗಳೂರು, ಮೈಸೂರು, ಬೆಂಗಳೂರುಗಳಿಗೆ ಕಳಿಸಿ ಆ ಮಹಿಳೆಯರನ್ನು ಅವರ ಕುಟುಂಬದವರನ್ನು, ಅಧಿಕಾರಿಗಳನ್ನು ಭೇಟಿಮಾಡಿ ಮಾಹಿತಿಗಳನ್ನು ಸಂಗ್ರಹಿಸಿದರು. ಅವರಿಗೆ 30 ಪ್ರಕರಣಗಳ ಪತ್ತೆ ಹತ್ತಿತು. ಇದೇ ದಿ. 2-1-2004ರಿಂದ 4-1-2004ರವರೆಗೆ 3 ದಿನಗಳ ಕಾಲ ಬೆಂಗಳೂರಿನಲ್ಲಿ ಈ ಬಗ್ಗೆ ನಾನಾ ಕಾರ್ಯಕ್ರಮಗಳನ್ನು ನಡೆಸಿದರು. ಮೈಸೂರುಬ್ಯಾಂಕ್ ವೃತ್ತದಲ್ಲಿ ಮಾನವ ಸರಪಳಿ, 'ಸುಟ್ಟರೂ ಸೋಲಪ್ಪದವರು' ಸಾಕ್ಷ್ಯಚಿತ್ರ ಪ್ರದರ್ಶನ, ವಿಚಾರ ಸಂಕಿರಣ, ಸಾರ್ವಜನಿಕ ವಿಚಾರಣೆಯನ್ನು ನಡೆಸಿದರು.

ದಿನಾಂಕ 4-1-2001ರಲ್ಲಿ ಬೆಂಗಳೂರಿನ ಸೆಂಟ್ರಲ್‌ಕಾಲೇಜಿನ ಸಭಾಂಗಣದಲ್ಲಿ ನಡೆದ ಸಾರ್ವಜನಿಕ ವಿಚಾರಣೆ ಇಂತಹ ದುರಾದೃಷ್ಟಮಹಿಳೆಯರ ಭವಿಷ್ಯದ ಬಗ್ಗೆ ಜೀವನದ ಬಗ್ಗೆ ಕೃತ್ಯದ ಭೀಕರತೆಯ ಬಗ್ಗೆ ಸರ್ಕಾರದ, ಸಮಾಜದ ಕಣ್ಣು ತೆರೆಸುವ ಉತ್ತಮ ಪರಿಣಾಮಕಾರಿ ಪ್ರಯತ್ನ. ಇದರಲ್ಲಿ ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸಚಿವೆ ಶ್ರೀಮತಿ ಮೋಟಮ್ಮ, ಬೆಂಗಳೂರು ಪೋಲೀಸ್ ಕಮೀಶನರ್ ಶ್ರೀ ಎಸ್. ಮರಿಸ್ವಾಮಿ, ನಿವೃತ್ತ ನ್ಯಾಯಾಧೀಶ, ಶ್ರೀ ಕೋ. ಚೆನ್ನಬಸಪ್ಪ ಚಿಂತಕಿ ಡಾ. ವಿಜಯಾ ಹಾಗೂ ನಾನು ವಿಚಾರಣೆಯ ತೀರ್ಪುಗಾರರಾಗಿ ಭಾಗವಹಿಸಿದ್ದೆವು. ಆಸಿಡ್ ಧಾಳಿಗೆ ಒಳಗಾಗಿ ತತ್ತರಿಸುತ್ತಿರುವ, ಆದರೂ ಧೈರ್ಯದಿಂದ, ಕಡಿದುಹೋದ ಜೀವನದ ಎಳೆಗಳನ್ನು ಮರುಹೊಂದಿಸಿಕೊಳ್ಳಲು ಪ್ರಯತ್ನಿಸುತ್ತಿರುವ ಐವರು ಮಹಿಳೆಯರು ವಿಚಾರಣೆಯಲ್ಲಿ ಭಾಗವಹಿಸಿ ತಮ್ಮ ದುರಂತಕತೆಗಳನ್ನು ಮನಬಿಚ್ಚಿ, ಹೇಳಿದರು. ಅವರು ಮಾತನಾಡುವ ಅವಶ್ಯಕತೆಯೇ ಇರಲಿಲ್ಲ. ಅವರ ಸುಟ್ಟುಹೋದ, ವಿರೂಪಗೊಂಡ ಮುಖಗಳೇ ಅವರ ದುರಂತ ಕತೆಗಳನ್ನು ಹೇಳಿದವು.

ಮೈಸೂರಿನ ಶಾಂತಿ ಬಡಕುಟುಂಬದಿಂದ ಬಂದು ರಘು ಎಂಬಾತನನ್ನು ಮದುವೆಯಾಗಿದ್ದರು. ಪ್ರಾರಂಭದಿಂದ ವರದಕ್ಷಿಣೆಗಾಗಿ ಹಿಂಸೆ. ಸಾರಿನಲ್ಲಿ ಕೂದಲಿತ್ತೆಂದು ಹೊಡೆತ, ಮತ್ತೆ ಯಾವ-ಯಾವುದಕ್ಕೋ ಹೊಡೆತ. ಸಿಗರೇಟ್‌ನಲ್ಲಿ ಸುಡುತ್ತಿದ್ದ. ಗಂಡನೆಂದರೆ ಹೊಡೆಯಲೇ ಬೇಕೆಂದು, ಹೆಣ್ಣು ಇರೋದೇ ಹೊಡೆಸಿಕೊಳ್ಳಲು ಎಂದು ನಾನು ತಿಳಿದಿದ್ದೆ, ಕಾರಣ, ಮನೆಯವರು ಹೊಡೆಯುವವನು ಗಂಡ ತಾನೇ ಎಂದು ಮತ್ತೆ-ಮತ್ತೆ ಬುದ್ಧಿ ಹೇಳಿ ಗಂಡನ ಮನೆಗೆ ವಾಪಸ್ ಕಳಿಸುತ್ತಿದ್ದರು. ನನ್ನ ಹೆಂಡತಿ, ನಾನು ಬೇಕಾದ್ದು ಮಾಡುತ್ತೇನೆ ಎಂದು ಗಂಡ ಅವಳ ತಂದೆ, ತಾಯಿಗಳ ಮುಂದೆಯೇ ಹೊಡೆಯುತ್ತಿದ್ದ. ಆದರೂ ಇಬ್ಬರು ಮಕ್ಕಳಿಗಾಗಿ ಜೊತೆಗಿದ್ದೆ. ಕೊನೆಗೆ ಬೇಸತ್ತು ಮನೆಯಿಂದ ಹೊರಬಂದು, ಶಿಕ್ಷಕಿಯಾಗಿ ಇಬ್ಬರು ಮಕ್ಕಳನ್ನು ಸಾಕುತ್ತಾ ಸ್ವತಂತ್ರವಾಗಿದ್ದಾಗ, ಅದನ್ನೂ ಸಹಿಸಿಕೊಳ್ಳದೇ ಗಂಡ ಪಶ್ಚಾತ್ತಾಪ ಪಡುವಂತೆ ನಟಿಸಿ ಮನೆಗೆ ಅವರನ್ನು ವಾಪಸ್ಸು ಕರೆತಂದ. ಒಂದು ರಾತ್ರಿ ಗೊತ್ತಿಲ್ಲದಂತೆ ಆಸಿಡ್ ತಂದಿಟ್ಟುಕೊಂಡು ಮಾರನೆಯ ಬೆಳಗ್ಗೆ ಎಂದರೆ 10-10-2001ರಂದು ಮುಖಕ್ಕೆ ಎರಚಿದ.

ಇದೇ ಅಮಾನವೀಯವೆಂದರೆ ಮುಂದೆ ನಮ್ಮ ಸಮಾಜ-ವೈದ್ಯರು ಅವಳನ್ನು ನಡೆಸಿಕೊಂಡುದು ಇನ್ನೂ ಅಮಾನವೀಯ. ಮೈಸೂರಿನ ಕೆ.ಆರ್. ಆಸ್ಪತ್ರೆಯಲ್ಲಿ ಅವಳಲ್ಲಿ ಹಣವಿಲ್ಲದ್ದರಿಂದ ಚಿಕಿತ್ಸೆ ಸಿಗಲಿಲ್ಲ. ಖಾಸಗಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಮಾಡಿದರು. ಮನೆಯ ಸಾಮಾನು ಮಾರಿ ಚಿಕಿತ್ಸೆ ಮಾಡಿಸಬೇಕಾಯಿತು. ಮೈಸೂರಿನ ಒಡನಾಡಿ ಸಂಸ್ಥೆ ಸ್ವಲ್ಪ ಧನ ಸಹಾಯಮಾಡಿದರು. ಜಾಗೃತಿಯವರು ಈಗ ಒಂದು ಪುಟ್ಟ ಅಂಗಡಿ ಇಡಲು ಸಹಾಯ ಮಾಡಿದ್ದಾರೆ. ಆದರೆ, ಪೂರ್ತಿ ಚಿಕಿತ್ಸೆಯಾಗದೇ ಮುಖ ಇನ್ನೂ ವಿರೂಪವಾಗಿದೆ. ಜನರಿಗೆ ಮುಖ ತೋರಿಸುವುದು ಕಷ್ಟ. ಈ ಘೋರ ಮುಖ ನೋಡಿದ ಜನ ಅಂಗಡಿಗೆ ವ್ಯಾಪಾರಕ್ಕೆ ಬರುವುದಿಲ್ಲ. ಇನ್ನೂ ಸರ್ಜರಿಯಾಗಬೇಕಾಗಿದೆ. ಸರ್ಕಾರದಿಂದ ಏನೂ ಸಹಾಯ ಸಿಕ್ಕಿಲ್ಲ. ಡಿ.ಸಿ. ಆಫೀಸಿಗೆ 100 ಬಾರಿ ಸುತ್ತಿದ್ದೇನೆ. ಕ್ಲರ್ಕ್ ಕೂಡಾ ಮಾತನಾಡಿಸುವುದಿಲ್ಲ. ಸ್ವತಃ ಗಂಡನೇ ಆಸಿಡ್ ಹಾಕಿರುವುದರಿಂದ ಏನೂ ಸಹಾಯ ಮಾಡಲಾಗುವುದಿಲ್ಲ ಎಂದು ಶ್ರೀನಿವಾಸ ಪ್ರಸಾದ್ ಹೇಳಿದರು. ಬ್ಯಾಂಕಿಗೆ ಸಾಲ ಕೇಳಲು ಹೋದರೆ ಎದುರೇ ಇಲ್ಲವೆನ್ನುತ್ತಾರೆ. ಗಂಡ ಕೊಲೆಯತ್ನ ಆರೋಪದ ಮೇಲೆ ಜೈಲಿನಲ್ಲಿದ್ದಾನೆ. ಚಿಕಿತ್ಸೆ, ಜೀವನ ನಿರ್ವಹಣೆಗೆ ಹಣವಿಲ್ಲ. ಇದು ಶಾಂತಿಯ ಅಳಲು. ಘಟನೆಯಾದಾಗ ಅವಳಿಗೆ 28 ವರ್ಷ. ಈಗಲೂ ಅವಳಿಗೆ ಒಂದು ಕಿವಿ ಕೇಳಿಸುವುದಿಲ್ಲ.

ಹಸೀನಾಳದ್ದು ಬೇರೆ-ಬೇರೆ ಕಾರಣಗಳಿಗಾಗಿ ಹೆಚ್ಚು ಪ್ರಚಾರ ಪಡೆದ ಘಟನೆ. 21 ವರ್ಷದ ಹಸೀನಾ ಕಂಪ್ಯೂಟರ್ ಶಿಕ್ಷಣ ಪಡೆದು ಜೋಸೆಫ್ ರಾಡ್ರಿಗ್ಸ್ ಎಂಬಾತನ ಸಾಫ್ಟ್‌ವೇರ್ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದಳು. ಬೇರೆಡೆ ಮುಂದೆ ಕೆಲಸಕ್ಕೆ ಆಕೆ ಸೇರಿದಾಗ, ಅದನ್ನು ಬಿಟ್ಟು ಪುನಃ ತನ್ನ ಕಂಪನಿಗೆ ಬರಬೇಕೆಂದು ಪದೇ ಪದೇ ಒತ್ತಾಯಿಸುತ್ತಿದ್ದ. ಒಪ್ಪದಾಗ ಅದನ್ನು ಸಹಿಸದ ಆತ ಮುಖಕ್ಕೆ ಆಸಿಡ್ ಹಾಕಿದ. ಕೊಲೆಯತ್ನದ ಮೇಲೆ ಈತನ ಮೇಲೂ ಕೇಸ್ ಹಾಕಲಾಗಿದೆ. ಇವಳಿಗೆ ಎರಡೂ ಕಣ್ಣು ಕಾಣಿಸುವುದಿಲ್ಲ. ಚಿಕಿತ್ಸೆಗೆ ಸಾರ್ವಜನಿಕರಿಂದ ದೇಣಿಗೆಯಾಗಿ ಬಂದ ಲಕ್ಷಾಂತರ ರೂಪಾಯಿ ಖರ್ಚಾಗಿದೆ. ಇನ್ನೂ ಚಿಕಿತ್ಸೆಯ ಅಗತ್ಯವಿದೆ. ಮುಖ ಇನ್ನೂ ವಿಕೃತವಾಗಿದೆ.

ಈ ಕಾರಣದಿಂದ ಕೃತ್ಯ ನಡೆಯಿತೆಂದರೆ ಜನ ನಂಬುವುದಿಲ್ಲ. ಏನೋ ಸಂಬಂಧ ಇರಬೇಕೆನ್ನುತ್ತಾರೆ. ಹಾಗೇನೂ ಇಲ್ಲ. ಆದರೆ ಇದ್ದರೂ ಆಸಿಡ್ ಹಾಕಬೇಕಾ? ಎಂದು ಹಸೀನಾ ಪ್ರಶ್ನಿಸುತ್ತಾರೆ. ಎಲ್ಲಾ ತಪ್ಪೂ ಹುಡುಗಿಯರೇ ಮಾಡುತ್ತಾರಾ? ಎಲ್ಲರೂ ಹುಡುಗಿಯರದೇ ತಪ್ಪೆನ್ನುತ್ತಾರೆ. ನಾನು ಇದರಲ್ಲಿ ಮಾಡಿದ ತಪ್ಪಾದರೂ ಏನು? ಎಂದಾಗ ಸಮಾಜ ಏನು ಉತ್ತರಿಸುತ್ತದೆ? ಸರ್ಕಾರ ಏನೂ ಧನಸಹಾಯ ಮಾಡಿಲ್ಲ. ಖಾಸಗಿ ಆಸ್ಪತ್ರೆಯಲ್ಲೇ ಎಲ್ಲಾ ಚಿಕಿತ್ಸೆಯಾಗಿರುವುದು. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಸರಿಯಾದ ಚಿಕಿತ್ಸೆ ಸಿಗಲಿಲ್ಲ. ಕೋರ್ಟಿನಲ್ಲಿಯೂ ಸಹ ಇಡೀದಿನ ಕುಳಿತಿರಬೇಕಾಯಿತು. ಔಷಧಿ ತೆಗೆದುಕೊಳ್ಳಲೂ ಸಮಯ ಸಿಗಲಿಲ್ಲ. ದಿನಾಂಕ 22-4-1999ರಂದು ಘಟನೆ ನಡೆದಾಗ ಬೇಕಾದಷ್ಟು ಸಾರ್ವಜನಿಕರು ನೋಡಿದರೂ ಯಾರೂ ಸಹಾಯ ಮಾಡಲಿಲ್ಲ ಎಂದು ಸಂಕಟದಿಂದ ಆಕೆ ಹೇಳಿದಾಗ ಏನೆಂದು ಆಕೆಯನ್ನು ಸಮಾಧಾನ ಪಡಿಸುವುದು? ಸಮಾಜವೇಕೆ ಇಷ್ಟು ಹೇಡಿಯಾಗಿದೆ ಅಥವಾ ಸಂವೇದನಾಶೀಲತೆಯನ್ನು ಕಳೆದುಕೊಂಡಿದೆ?

22-8-2002ರಂದು ಘಟನೆ ನಡೆದಾಗ ಶ್ರುತಿಗೆ ಕೇವಲ 16 ವರ್ಷ. ಮದುವೆಯಾಗುವಂತೆ ಅವಳನ್ನು ಪೀಡಿಸುತ್ತಿದ್ದ ರಾಜೇಶ್, ಅದು ಸಾಧ್ಯವಾಗಲಾರದೆಂದು ತಿಳಿದಾಗ, ಅವಳ ಕುಟುಂಬದವರು ಮನೆ ಬದಲಾಯಿಸಿದಾಗಲೂ ಹಟದಿಂದ ಬೆನ್ನುಹತ್ತಿ ಆಸಿಡ್ ಹಾಕಿದ್ದಾನೆ. ಇವನಿಗೆ ಉಪೇಂದ್ರನ ಸಿನಿಮಾ ಸ್ಫೂರ್ತಿಯಂತೆ! ಇವನನ್ನು ಕೊಲೆಯತ್ನದ ಮೇಲೆ ಬಂಧಿಸಿ ಕೇಸ್ ಹಾಕಲಾಗಿದೆ.

ಸಾರ್ವಜನಿಕ ವಿಚಾರಣೆಯ ಸಮಯದಲ್ಲಿ ಈಕೆ ಹಾಜರಿದ್ದರೂ ಆಗ ತಾನೇ ಆಪರೇಶನ್ ಆಗಿದ್ದರಿಂದ ಆಕೆ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ನಮ್ಮ ಮುಖ ನೋಡಿದರೆ ಎಲ್ಲೂ ಕೆಲಸ ಸಿಗುವುದಿಲ್ಲ. ಆದರೆ ನಾನು ಖಾಲಿ ಹಾಗೇ ಕುಳಿತು ತಿನ್ನಲು ಇಚ್ಚಿಸುವುದಿಲ್ಲ. ಸರ್ಕಾರ ಕೆಲಸಕೊಡಲು ನನ್ನ ನೆರವಿಗೆ ಬರಬೇಕು, ಆಸಿಡ್ ಸುಲಭವಾಗಿ ಸಿಗದಂತೆ ನೋಡಿಕೊಳ್ಳಬೇಕು ಎಂದಷ್ಟೇ ಹೇಳಿದಳು ಶ್ರುತಿ.

ತಾರಾಳ ಕತೆ ಯಾವುದೇ ಸಿನಿಮಾಕ್ಕೆ (ಸಂವೇದನಾಶೀಲತೆ ಹೊಂದಿರುವ ನಿರ್ದೇಶಕನ ನಿರ್ದೇಶನದಲ್ಲಿ) ಒಳ್ಳೆಯ ವಸ್ತುವಾಗಬಲ್ಲದು. ಮದುವೆಯಾಗಿ ಇಬ್ಬರ ಮಕ್ಕಳ ತಾಯಿಯಾದ ಇಳಕಲ್ಲಿನ ಈಕೆ, ಗಂಡ ನೌಕರಿಗಾಗಿ ಕೊಲ್ಲಿರಾಷ್ಟ್ರಕ್ಕೆ ಹೋದಾಗ ಸಂಸಾರದ ನೊಗ ಹೊರಲು ಟಿ.ಸಿ.ಎಚ್. ಮಾಡಿ ಶಿಕ್ಷಕಿಯ ನೌಕರಿ ಪಡೆದಳು, ಅತ್ಯಂತ ಕ್ರಿಯಾಶೀಲ ಹಾಗೂ ದಕ್ಷಶಿಕ್ಷಕಿ, ಧೈರ್ಯವಂತೆ ಎಂದು ಹೆಸರು ಪಡೆದಳು. ಸಹ-ಶಿಕ್ಷಕರಾದ ಭೀಮಾರೆಡ್ಡಿ ಮತ್ತು ಭೀಮನಗೌಡ ಎಂಬುವರು ತಾರಾಗೆ ಲೈಂಗಿಕ ಕಿರುಕುಳ ಕೊಡಲಾರಂಬಿಸಿದಾಗ ಆಕೆ ಬೇರೆ ಊರಿಗೆ ವರ್ಗಾವಣೆ ಮಾಡಿಸಿಕೊಂಡು ಅದರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದರೂ ಇವರು ದಿನಾಂಕ : 10-4-2003ರಂದು 2002-2003ರ ಶೈಕ್ಷಣಿಕ ವರ್ಷದ ಕೊನೆಯ ದಿನ ಸಹಿ ಮಾಡಿಬರಲು ಮನೆಯ ಕೆಲಸದವರೊಂದಿಗೆ ಹೋಗಿದ್ದಾಗ ತಾರಾ ಮೇಲೆ ಆಸಿಡ್ ಹಾಕಿದ್ದಾರೆ. ಈಗ ಅವರ ಮೇಲೆ ತೀವ್ರಗಾಯ ಉಂಟುಮಾಡಿದ ಆರೋಪದ ಮೇಲೆ ಕೇಸು ಹಾಕಲಾಗಿದೆ. ಆದರೆ, ಈಗಲೂ ಆಕೆಗೆ, ಗಂಡನಿಗೆ ಆಕೆಯ ಮನೆಯವರಿಗೆ ಬೆದರಿಕೆಯ ಪತ್ರಗಳು, ಕರೆಗಳು ಬರುತ್ತಲೇ ಇವೆ. ಹಾಗಾಗಿ ಆಕೆ ಈಗ ಗಂಡ-ಮಕ್ಕಳೊಂದಿಗೆ ಬೆಂಗಳೂರಿನಲ್ಲಿ ಬಂದಿದ್ದಾಳೆ, ಚಿಕಿತ್ಸೆ ಇನ್ನೂ ನಡೆಯುವುದು ಬಹಳವಿದೆ. ಗಂಡನ, ಮನೆಯವರ ಬೆಂಬಲವಿರುವುದು ಈಕೆಯ ಅದೃಷ್ಟ ಆದರೆ, ಧನಸಹಾಯ ಕಷ್ಟ

ಹಸೀನಾ, ಶ್ರುತಿ ಇವರ ಬಗ್ಗೆ ಪತ್ರಿಕೆಯಲ್ಲಿ ಓದಿದ್ದೆ ಆದರೆ, ನನಗೇ ಹಾಗೆ ಆಗಬಹುದೆಂದು ನನಗೆ ತಿಳಿದಿರಲಿಲ್ಲ. ಮಾರನೆಯ ದಿನದಿಂದ ಶಾಲೆಗೆ ರಜಾ ಇತ್ತು, ಮಕ್ಕಳೊಂದಿಗೆ ಊರಿಗೆ ಹೋಗುವ ಕನಸು ಕಾಣುತ್ತಿದ್ದೆ. ಈ ರೀತಿ ಆಯಿತು ಎಂದು ವ್ಯಥೆಯಿಂದ ಹೇಳಿದರು. ಒಂದು ಕಣ್ಣು ಹೋಗಿದೆ, ಇನ್ನೊಂದು ಕಣ್ಣು ಸರಿಯಾಗಿ ಕಾಣುವುದಿಲ್ಲ, ನನ್ನ ಕೆಲಸದ ಮೇಲೆಯೇ ನನ್ನ ಮಕ್ಕಳ ಜೀವನ ಅವಲಂಬಿಸಿತ್ತು, ಈಗೇನು ಮಾಡಲಿ, ಸಂಕಟ ಆಗುತ್ತದೆ, ಜೀವನ ಹಾಳಾಯಿತು, ಇದರಿಂದ ಅವನಿಗಾದರೂ ಏನು ಸಿಕ್ಕಿತು, ಮಕ್ಕಳೂ ನನ್ನ ಹತ್ತಿರ ಬರಲು ಹೆದರುತ್ತಾರೆ. ಈ ರೀತಿ ಹೆಣ್ಣಿನ ಮೇಲೆ ಆಸಿಡ್ ಹಾಕುವುದು ಹೇಡಿತನ, ಎದುರಿಗೆ ಬಂದು ಮಾತಾಡಬೇಕು, ಹೆಣ್ಣಿಗಷ್ಟೇ ಶೀಲ ಮುಖ್ಯವೇ, ಒಂದು ಹೆಣ್ಣಿನ, ಅದರಲ್ಲೂ ಮದುವೆಯಾಗಿ ಗಂಡ ಮಕ್ಕಳಿರುವ ಹೆಣ್ಣಿನ ಬೆನ್ನು ಹತ್ತುವ ಇಂತಹ ಪುರುಷರ ಶೀಲದ ಬಗ್ಗೆ ಸಮಾಜ ಏಕೆ ಪ್ರಶ್ನಿಸುವುದಿಲ್ಲ? ಎಂದು ಆಕ್ರೋಶ ವ್ಯಕ್ತಪಡಿಸಿದರು. ಅವರಿಗೆ ಕೊಡಬೇಕಾದ ಶಿಕ್ಷೆಯ ಬಗ್ಗೆ ಹೇಳುತ್ತಾ ಅವರಿಗೆ ಮರಣ ದಂಡನೆ ವಿಧಿಸಬೇಕು ಅಥವಾ ನಮಗೂ ಅವರ ಮುಖಕ್ಕೆ ಆಸಿಡ್ ಹಾಕಲು ಅವಕಾಶ ಕೊಡಬೇಕು, ನಮಗೆ ಆಗಿದ್ದು ಅವರೂ ಅನುಭವಿಸಬೇಕು. ಆಗ ಅವರಿಗೂ ತಿಳಿಯುತ್ತದೆ. ನೆನೆಸಿಕೊಂಡರೆ ರಕ್ತ ಕುದಿಯುತ್ತದೆ ಎನ್ನುವಾಗ ತಾರಾ ಬಹಳಷ್ಟು ಭಾವಾವೇಶಕ್ಕೆ ಒಳಗಾಗಿ ಕಣ್ಣೀರಿಟ್ಟರು. ಅವರ ಸಂಕಟವನ್ನು ನೋಡಿ ಎಲ್ಲರ ಕಣ್ಣಲ್ಲೂ ನೀರಾಡಿತು. ಶ್ರೀಮತಿ ಮೋಟಮ್ಮ, ಡಾ. ವಿಜಯಾ, ಶ್ರೀ ಕೋ. ಚೆನ್ನಪ್ಪನವರೂ ಕಣ್ಣು ಒರೆಸಿಕೊಂಡರು. ನಾನು ಕಷ್ಟಪಟ್ಟು ತಡೆದುಕೊಂಡರೂ ಕಣ್ಣು ಹಸಿಯಾಯಿತು.

ರಾಯಚೂರಿನ ಹತ್ತಿರ ಗಿಲ್ಲೆಸುಗೂರು ಹಳ್ಳಿಯ ಸಪ್ನ 19 ವರ್ಷದ ಹುಡುಗಿ. ಮದುವೆಯಾದ ಈರೇಶ್ ತನಗೆ ಮೋಟಾರ್ ಬೈಕ್ ಬೇಕೆಂದು ಹೆಂಡತಿಯನ್ನು ತೌರಿಗೆ ಅಟ್ಟಿದಾತ. 13-11-2002ರಂದು ಜಗಳವಾಡಿ ಕೆಲಸಕ್ಕೆ ಮನೆಯಿಂದ ಹೋದವನು ಅರ್ಧಗಂಟೆಯಲ್ಲೇ ಆಸಿಡ್‌ನೊಂದಿಗೆ ಮನೆಗೆ ಮರಳಿ. ಸಪ್ನ ಮುಖಕ್ಕೆ ಆಸಿಡ್ ಎರಚಿದ. ಇದ್ದಕ್ಕಿದ್ದಂತೆ ಗಂಡ ಮರಳಿದಾಗ ಆಶ್ಚರ್ಯಹೊಂದಿ ಎದ್ದು ಕುಳಿತ ಸಪ್ನಾನ ಅದೃಷ್ಟ ಇದ್ದಿದ್ದಲ್ಲಿ ಚೆನ್ನಾಗಿತ್ತು. ಇದ್ದಕ್ಕಿದ್ದಂತೆ ಎದ್ದು ಕುಳಿತಾಗ ಮುಖಕ್ಕೆ ಬೀಳಬೇಕಾದ ಆಸಿಡ್ ಎದೆಗೆ ಹಾಗೂ ಹೊಟ್ಟೆಗೆ ಬಿತ್ತು.

ಕೆ.ಎಸ್.ಆರ್.ಟಿ.ಸಿ. ಕಂಡಕ್ಟರ್ ಆಗಿದ್ದ ಈರೇಶನಿಗೆ ಮದುವೆಯಲ್ಲಿ 40,000 ರೂ. ವರದಕ್ಷಿಣೆ, ಒಂದು ತೊಲ ಬಂಗಾರ ಸಿಕ್ಕಿತು. ಆದರೆ, ಮದುವೆಯಾದ ಮೂರು ತಿಂಗಳಲ್ಲೇ ಗಂಡ, ಮನೆಮಂದಿಯಿಂದ ಹಿಂಸೆ ಆರಂಭವಾಗಿತ್ತು. ಮರಣಯತ್ನದ ಕೇಸು ಈಗ ವರದಕ್ಷಿಣೆ ಹಿಂಸೆಯ ಕೇಸಿಗೆ ಬದಲಾಗಿದೆ. ಗಂಡ ಜೇಲ್ ಮೇಲಿದ್ದು ಇನ್ನೂ ಬೆದರಿಸುತ್ತಲೇ ಇದ್ದಾನೆ.

ಮೈಸೂರಿನ ಡಾ. ಮಹಾಲಕ್ಷ್ಮಿಗೆ ದಿನಾಂಕ 11-1-2001ರಂದು ರಾತ್ರಿ ಆಸಿಡ್ ಹಾಕಿದವರನು ಆಕೆಯ ಮನೆಯ ಮಾಲೀಕ.

ಇವೆಲ್ಲರ ಆಸಿಡ್ ಘಟನೆಗಳ ಹಿಂದಿನ ಭಾವಚಿತ್ರಗಳನ್ನು ನೋಡಿ, ಈಗಿರುವ ಸ್ಥಿತಿಯನ್ನು ನೋಡಿದಾಗ ರೋಷ ಉಕ್ಕುತ್ತದೆ. ಆರೋಗ್ಯ - ರೂಪ - ಲವಲವಿಕೆಯಿಂದ ಕೂಡಿದ್ದ ಈ ಯುವತಿಯರ ಆತ್ಮಶಕ್ತಿಯನ್ನು , ತನ್ನ ತನವನ್ನು ಸ್ತ್ರೀತ್ವವನ್ನು ನಾಶಮಾಡಿ ತಮ್ಮ ಪುರುಷತ್ವ ಮೆರೆಯಲು ಇಂತಹ ಹೀನಕೃತ್ಯ ಎಸಗಲಾಗಿದೆ. ಆದರೆ ಇವರಾರೂ ಸೋಲನ್ನು ಒಪ್ಪಿಕೊಂಡಿಲ್ಲ, ಬದುಕನ್ನು ಸವಾಲಾಗಿ ಸ್ವೀಕರಿಸಿದ್ದಾರೆ. ಆಸಿಡ್ ಧಾಳಿಮಾಡಿ ತಮ್ಮನ್ನು ಹತ್ತಿಕ್ಕಲು ಪ್ರಯತ್ನಿಸಿದವರ ವಿರುದ್ಧ ಕಾನೂನು ಕ್ರಮಕೈಗೊಳ್ಳುವುದಲ್ಲದೇ, ಅವರ ಎದುರು ಪುನಃ ಆರೋಗ್ಯವಂತರಾಗಿ, ಆರ್ಥಿಕವಾಗಿ ಸ್ವಾವಲಂಬಿಗಳಾಗಿ ಉತ್ತಮ ಜೀವನ ನಡೆಸಿ ತೋರಿಸುವ ಛಲ ಹೊಂದಿದ್ದಾರೆ. ಕೆಲವರಿಗೆ ಮನೆಯವರ ಬೆಂಬಲವಿದೆ. ಕೆಲವರಿಗೆ ಅದೂ ಇಲ್ಲ. ಹತ್ತಿರದ ಗಂಡ, ಪರಿಚಯಸ್ಥರೇ ಈ ರೀತಿ ಮಾಡಿರುವುದು ಅವರಿಗೆ ಮಾನವೀಯ ಸಂಬಂಧಗಳಲ್ಲಿ ನಂಬಿಕೆ ಕಳೆದುಕೊಳ್ಳುವಂತೆ ಮಾಡಿದೆ. ಈಗ ಅವರಿಗೆ ಬೇಕಾಗಿರುವುದು ಸಹಾನುಭೂತಿ, ಸಾರ್ವಜನಿಕರ ಬೆಂಬಲ ಮಾತ್ರವಲ್ಲ, ಧನಸಹಾಯ, ಮಾಡಲು ಕೆಲಸ. ಪ್ಲಾಸ್ಟಿಕ್ ಸರ್ಜರಿ ದೀರ್ಘ ಕಾಲದ, ಬಹುಖರ್ಚಿನ ಚಿಕಿತ್ಸೆ ಸರ್ಕಾರದಿಂದಲೇ, ಸರ್ಕಾರಿ ಆಸ್ಪತ್ರೆಗಳಲ್ಲಾಗಲೀ ನೆರವು ದೊರಕಿಲ್ಲ.

ಸಚಿವೆ ಮೋಟಮ್ಮ ಮಾತನಾಡಿ ಸ್ವಯಂ ಉದ್ಯೋಗಕ್ಕೆ ಧನಸಹಾಯ ಕೊಡಿಸಲು ಸಾಧ್ಯವೆಂದರು. ಸರಿಯಾದ ಮಾಹಿತಿ ಸಿಗದೇ ಸಹಾಯ ಮಾಡಲಾಗುತ್ತಿಲ್ಲ. ಇಲ್ಲಿ ತೆಗೆದುಕೊಳ್ಳುವ ನಿರ್ಣಯಗಳನ್ನು ಪರಿಶೀಲಿಸಿ ಸಾಧ್ಯವಾದುದನ್ನು ಮಾಡಬಹುದೆಂದು ಆಶ್ವಾಸನೆಯಿತ್ತರು. ಈ ಬಗ್ಗೆ ಅವರು ಕಾರ್ಯಪ್ರವೃತ್ತರಾಗಿ ರಾಜ್ಯಮಹಿಳಾ ಆಯೋಗದೊಂದಿಗೆ ಅವರ ಇಲಾಖೆಯ ಮೂಲಕ ಒಂದು ಸಮಾಲೋಚನಾ ಸಭೆಯನ್ನು ದಿನಾಂಕ 16-1-2004ರಂದು ಕರೆದಿದ್ದರು.

ಶ್ರೀ ಮರಿಸ್ವಾಮಿಯವರು ಪೋಲೀಸರು ಹೆಚ್ಚಿನ ಪ್ರಕರಣಗಳಲ್ಲಿ ಸರಿಯಾದ ಸಮಯಕ್ಕೆ ಸೂಕ್ತಕ್ರಮ ಕೈಗೊಳ್ಳಲಿಲ್ಲ

ಎನ್ನುವ ಆಪಾದನೆಯನ್ನು ಎದುರಿಸಿ, ಅಂತಹ ಪ್ರಕರಣಗಳನ್ನು ಗಮನಕ್ಕೆ ತಂದರೆ ತಕ್ಷಣ ಸೂಕ್ತಕ್ರಮ ಕೈಗೊಳ್ಳುವುದಾಗಿ ತಿಳಿಸಿದರು. ಆದರೆ, ಅವರು ನೀಡಿದ ಒಂದು ಮಾಹಿತಿ ಸಮಸ್ಯೆಯ ಇನ್ನೊಂದು ಮುಖವನ್ನು ತೋರಿಸಿತು. ಬೆಂಗಳೂರಿನಲ್ಲಿ 2003ರ ವರೆಗೆ ಕಳೆದ 11 ವರ್ಷಗಳಲ್ಲಿ 30 ಆಸಿಡ್ ಪ್ರಕರಣಗಳು ದಾಖಲಾಗಿವೆ. ಅದರಲ್ಲಿ 50% ಮಹಿಳೆಯರ ಮೇಲೆ 50% ಪುರುಷರ ಮೇಲೆ ಆಗಿದೆ (ಇಬ್ಬರ ಮೇಲೂ ಆಸಿಡ್ ಹಾಕಿದವರು ಪುರುಷರೇ, ಮಹಿಳೆಯರ ಹಾಕಿಲ್ಲ) ಇವುಗಳಲ್ಲಿ 6 ಪ್ರೇಮಪ್ರಕರಣಗಳು, 6 ಕೌಟುಂಬಿಕ ವೈಷಮ್ಯದ ಪ್ರಕರಣಗಳು, ಉಳಿದಿದ್ದು ವೈಯಕ್ತಿಕ ದ್ವೇಷದ ಪ್ರಕರಣಗಳು. ಈ ಮಾಹಿತಿಯ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಮಹಿಳೆಯರ ಮೇಲೆ ಆಸಿಡ್ ಧಾಳಿ ಮಾಡುವಲ್ಲಿ ವೈಯಕ್ತಿಕ ದ್ವೇಷ - ಅಸೂಯೆಯಲ್ಲದೇ ಲಿಂಗದೌರ್ಜನ್ಯವೂ ಹೆಚ್ಚಿನ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಪುರುಷನನ್ನು ಎದುರಿಸಿ ನಿಂತು ಸ್ವತಂತ್ರವಾಗಿ ಬಾಳಲು ನಿರ್ಧರಿಸುವ ಮಹಿಳೆಯರ ಆತ್ಮಶಕ್ತಿಯನ್ನು ಸ್ವಾಭಿಮಾನವನ್ನು ಸ್ತ್ರೀತ್ವವನ್ನು ಬಗ್ಗುಬಡಿದು ತನ್ನ ಅಹಂಕಾರವನ್ನು, ಶ್ರೇಷ್ಠತೆಯನ್ನು ವಿಜೃಂಭಿಸುವ ಪುರುಷ ಮನಸ್ಸು ಇಲ್ಲಿ ಕಂಡುಬರುತ್ತದೆ.

ಈ ಎಲ್ಲಾ ಮಹಿಳೆಯರು ವ್ಯಕ್ತಪಡಿಸಿದ ಅಭಿಪ್ರಾಯಗಳೇ ಈ ಸಾರ್ವಜನಿಕ ವಿಚಾರಣೆಯ ನ್ಯಾಯಾಧೀಶರ ತೀರ್ಪು ಕೂಡಾ ಆಗಿದ್ದವು. ತಪ್ಪಿತಸ್ಥರಿಗೆ ಶೀಘ್ರವಾಗಿ, ಕಠಿಣಶಿಕ್ಷೆಯಾಗಬೇಕು, ಇದಕ್ಕಾಗಿ ಭಾರತ ದಂಡ ಸಂಹಿತೆಯಲ್ಲಿ ಒಂದು ಹೊಸ ಅಪರಾಧದ ಸೇರ್ಪಡೆ ಮಾಡಬೇಕು ಅಥವಾ ಮಹಿಳೆಯರ ಮೇಲಾಗುವ ದೌರ್ಜನ್ಯದ ಬಗ್ಗೆಯೇ ಇವು ಎಲ್ಲವನ್ನೂ ಒಳಗೊಳ್ಳುವ ಕಾನೂನಿನ ರಚನೆಯಾಗಬೇಕು ; ಶೀಘ್ರ ವಿಚಾರಣೆಗಾಗಿ ವಿಶೇಷ ನ್ಯಾಯಾಲಯ ಸ್ಥಾಪಿಸಬೇಕು ಅಥವಾ ತ್ವರಿತಗತಿಯ ನ್ಯಾಯಾಲಯ ಬೇಕು, ಇಂತಹ ತಪ್ಪಿಗೆ ಮರಣದಂಡನೆ ಅಥವಾ ಜೀವಾವಧಿ ಶಿಕ್ಷೆ ವಿಧಿಸಬೇಕು, ಇಲ್ಲಿ ಜೀವಾವಧಿ ಶಿಕ್ಷೆಯೆಂದರೆ 14 ವರ್ಷವಲ್ಲ, ಅಮೇರಿಕಾದಲ್ಲಿರುವಂತೆ ಅವನು ಬದುಕಿರುವವರೆಗೆ ಸೆರೆವಾಸ. ಸರ್ಕಾರಿ ಆಸ್ಪತ್ರೆಗಳಲ್ಲಿ ಪ್ಲಾಸ್ಟಿಕ್ ಸರ್ಜರಿ ವಿಭಾಗ ಬಲಪಡಿಸಿ ಇಂತಹ ನತದೃಷ್ಟ ಮಹಿಳೆಯರಿಗೆ ಉಚಿತ ಚಿಕಿತ್ಸೆ ನೀಡಬೇಕು, ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ನಡೆಯಲೇ ಬೇಕಾದರೆ ಸರ್ಕಾರ ಧನಸಹಾಯ ನೀಡಬೇಕು, ನಿಧಿ ಸ್ಥಾಪಿಸಬೇಕು. ಕಾರಣ, ಚಿಕಿತ್ಸೆಗೆ ಹಣವಿಲ್ಲದೇ ಅನೇಕ ಮಹಿಳೆಯರು ಕಷ್ಟಪಡುತ್ತಿದ್ದಾರೆ ; ಆರ್ಥಿಕವಾಗಿ ಸ್ವಾವಲಂಬಿಗಳಾಗಲು ಉದ್ಯೋಗದ ಬಗ್ಗೆ ಸರ್ಕಾರ ನೆರವು ನೀಡಬೇಕು ; ಅಪರಾಧಿಯಿಂದ ಅವರಿಗೆ ನಷ್ಟ ಪರಿಹಾರದ ಹಣ ಕೊಡಿಸಬೇಕು ; ಆಸಿಡ್ ಸುಲಭವಾಗಿ ಸಿಗದಂತೆ, ದುರ್ಬಳಕೆಯಾಗದಂತೆ ಕ್ರಮಕೈಗೊಳ್ಳಬೇಕು ; ಸಿನಿಮಾ-ಟಿ.ವಿ. ಸೀರಿಯಲ್‌ಗಳಲ್ಲಿ ಈ ರೀತಿಯ ಆಸಿಡ್ ಧಾಳಿಯ ಬಗ್ಗೆ ಪದೇ-ಪದೇ ತೋರಿಸುವುದನ್ನು (ಮನೋರಂಜನೆಯಾಗಿ ಅಥವಾ ಸಂವೇದನಾಶೀಲತೆ ಇಲ್ಲದ ರೀತಿಯಲ್ಲಿ) ನಿಲ್ಲಿಸುವಂತೆ ನಿರ್ಮಾಪಕ/ನಿರ್ದೇಶಕರಿಗೆ ಮನದಟ್ಟು ಮಾಡಿಕೊಡಬೇಕು, ಸೆನ್ಸಾರ್ ನೀತಿ ಈ ಬಗ್ಗೆ ಬಿಗಿಯಾಗಬೇಕು.

ಆಗಬೇಕಾದುದು ಬಹಳವಿದೆ, ತುರ್ತಾಗಿ ಆಗಬೇಕಾಗಿದೆ. "ಗಂಡಸರೇ! ನಮ್ಮನ್ನು ಬೇಕಾದರೆ ಕೊಂದುಬಿಡಿ, ಆದರೆ ಹೀಗೆ ನಮ್ಮ ಮೇಲೆ ಆಸಿಡ್ ಹಾಕಿ ದಿನಾ ಕೊಲ್ಲಬೇಡಿ" ಎಂದು ಒಬ್ಬ ಬಲಿಪಶುವಾದ ಮಹಿಳೆ ಆಕ್ರೋಶಿಸಿದ್ದು ಇಡೀ ದುರಂತಕ್ಕೆ ಹಿಡಿದ ಕನ್ನಡಿಯಾಗಿತ್ತು.

★

# ಇಡದಿರು ನನ್ನ ನಿನ್ನ ಸಿಂಹಾಸನದ ಮೇಲೆ

*ದಿವಂಗತ ಕೆ.ಎಸ್.ನರಸಿಂಹಸ್ವಾಮಿ ಅವರ ನೆನಪಿಗೆ*

ಇಡದಿರು ನನ್ನ ನಿನ್ನ ಸಿಂಹಾಸನದ ಮೇಲೆ ;
ತೊಡಿಸದಿರು ಚಂದ್ರಕಿರೀಟವನು.
ಕೊರಳಿಗೆ ಭಾರ ನನಗೆ ನಕ್ಷತ್ರಮಾಲಿಕೆ ;
ನಾನೊಲ್ಲೆ ದೊರೆತನವನು.

ಹಂಗಿಸದಿರು ನನ್ನ 'ಮಗು, ಮಗು, ಮಗು' ಎಂದು ;
ಭಂಗಿಸದಿರು ನನ್ನ ಬಲವನು.
ನಿನಗೆ ದೊರೆತನವಿಂದು ಬೇಸರವಾಯಿತೆಂದು
ವಹಿಸದಿರು ನನಗೆ ಅದನು.

ಇಡದಿರು ನನ್ನ ನಿನ್ನ ಸಿಂಹಾಸನದ ಮೇಲೆ ;
ಕಾಣಲಿ ಬಿಡು ನಿನ್ನ ಪೌರುಷ ಜ್ವಾಲೆ.
ಮುದ್ದಿನಲಿ ಹೇಡಿತನವನು ಊಡದಿರು ನನಗೆ ;
ವಜ್ರವಾಗಲಿ ನಿನ್ನ ಒಲುಮೆ.

ಎಷ್ಟು ಕಾಲದಮೇಲೆ ಇಷ್ಟೊಂದು ಅಭಿಮಾನ ?
ಅರ್ಥವಾಗದು ನಿನ್ನ ರೀತಿ.
ಅಂದು ಬೇಡದ ಕಂದ ಇಂದು ಅದೆ ಆನಂದ –
ಸ್ವಾರ್ಥತೆಯೆ ನಿನ್ನ ನೀತಿ ?

ತಾಯಿ ಹೇಳಿದಳು: ನೀನೆಂದೊ ಸೋಕಿದೆಯಂತೆ
ಅವಳ ಮೋಹನ ಭುಜವನು.
ನಾನಾಗ ಅಚ್ಚರಿಯ ನಡುವೆ ಹುಟ್ಟಿದೆನಂತೆ
ಮುತ್ತಿಡುತ ಭೂ – ಧ್ವಜವನು.

ಮರುಭೂಮಿಯಲಿ ನನಗೆ ಮುಗಿಲ ತೊಟ್ಟಿಲ ಕಟ್ಟಿ
ಹಿಮ ಬೆಂಕಿ ಬಿರುಗಾಳಿ ಬೀಸಿ
ಯಾವ ಹರುಷವೊ ತಾಯ್ಗೆ ನನ್ನಂಥ ಮಗ ಹುಟ್ಟಿ ! –
ಪೊರೆದಳಂತಮೃತವನೆ ಸೂಸಿ.

ಮಳೆ ಹೊಳೆ ಕಡಲೆಲ್ಲ ಹಾಡಿ ನನ್ನ ಕರೆಯೆ,
ಬೆಳೆ ಬದುಕೆಲ್ಲ ನೆಲದ ಚೆಲುವ ತೆರೆಯೆ,
ತಾಯಿ ನನ್ನನು ಹಿಡಿದು ಬೆಟ್ಟ ಬೆಟ್ಟದ ಮೇಲೆ
ಮುಗಿಲ ಮದ್ದಲೆಗೊಲಿದು ಕುಣಿದಳಂತೆ.

ದೇಶದೇಶದ ಬಿಸಿಲ ನನ್ನ ಕೆನ್ನೆಗೆ ತಳ್ಳಿ
ಕೂಸುಮರಿ ಮಾಡಿ ಬಾಂದಳದಲಿ
ಪರ್ವತಾರಣ್ಯಗಳ ಸಿಂಹಶಿಬಿರಗಳಲ್ಲಿ
ನನ್ನ ಬೆಳಸಿದಳಂತೆ ಅಗ್ನಿಕುವರಿ.

ನೀನಂದು ನನ್ನ ನೋಡಿರಬೇಕು, ನಸುನಕ್ಕು
ಕೈಬೀಸಿ ನಾ ನಿನ್ನ ಕರೆದೆ.
ನಿನಗಂಥ ರಾಜಾಧಿರಾಜನೆನ್ನುವ ಸೊಕ್ಕು !
ನನ್ನ ಮೈ ಮುಟ್ಟದೆಯೆ ನಡೆದೆ.

ತಾಯಂದಳಂತೆ : 'ಪುಟ್ಟಾಣಿ ಅವರನು ಕೂಗು,
ಅಂಬೆಗಾಲಿಡುತ ಆ ಮುಂದೆ ಹೋಗು'
ಅದ ಕೇಳಿ ಕೇಳದವನಂತೆ ಸರಿಯಲು ನೀನು
ಬಲು ನೊಂದಳಂತೆ: 'ಎಂಥವರು ಇವರು.'

'ತಾಯಿ ದೇವರು' ಎಂದು ತಾರೆಗಳು ಹಾಡಿದವು ;
'ಆಕೆ ಮಾಯೆಯೆ' ಎಂದರರಿಯದವರು.
ಅವಳ ಪ್ರೇಮದ ಸವಿಯ ನೀನು ಕಂಡಿರಬಹುದು.
ಆ ವಸುಂಧರೆಯ ಮಗ ನಾನು. ಕೇಳಿದನು :

– ನಾ ನಿನ್ನ ಕಾಣದೆಯೆ ಬೆಳೆದೆ ; ನಾ ಕಂಡಿಹೆನು
ತಾಯ ಸಂಪ್ರೀತಿಯನು, ಚೆಲುವನು.
ತನ್ನ ಮಗ ಬೆಳೆದು ತಂದೆಯ ಬಲವ ಗಳಿಸುವನು
ಎಂದವಳು ನಂಬಿರುವಳು.

ನಿನ್ನ ಹಂಗಿಲ್ಲದೆಯೆ ನಾ ಬಾಳುವುದ ಕಲಿಸು ;
ನೊಂದು ಮಾಗಲಿ ಜೀವ ಎಂದು ಹರಸು ;
ನಿನ್ನ ಕುರಿಯದ ನನ್ನ ದಾರಿಗೆಡರನು ನಿಲ್ಲಿಸು ;
ನಡೆದಂತೆ ದಾರಿಯನು ಬಿಚ್ಚಿ ಬೆಳಸು.

ಮಗನ ಕಾಡುವ ತಂದೆ ನೀನಾಗು, ಹಗೆಯಾಗು,
ಹಣ್ಣಾಗಿಸೆನ್ನುಸಿರನು.
ನಿನ್ನ ಬಂಡೆಯ ಮೇಲೆ ನನ್ನ ನೆತ್ತರ ಹನಿಸು
ಕಾಣಲ್ಲಿ ನಿನ್ನ ಹೆಸರನು !

ಬಂದ ಬಾಗಿಲು ಮಣ್ಣು : ಬಿಡುವ ಬಾಗಿಲು ಮಣ್ಣು
ನಡುವೆ ಕಾಪಾಡುವುದು ತಾಯ ಕಣ್ಣು.
ಈ ಕಣ್ಣಸೆರೆಯ ಕಲ್‌ಕೋಟೆಯೆಲ್ಲಾ ಹೊನ್ನು ;
ನನ್ನ ಕೈಬಿಡುವುದೇ ನಿನಗೆ ಚೆನ್ನು.

'ಮುಪ್ಪಿರದ ಸಾವಿರದ ನಿನ್ನ ದೊರೆತನವೆಂದು
ಮುಗಿದೀತು' ಎಂದು ಕಾದಿಲ್ಲ ನಾನು.
'ಬೆಳೆದ ಮಗ ಹೊರಲಿ ನೊಗ, ಕೇಳಿಬಿಡುವೆನೆ'ಂದು
ಭ್ರಮೆಗೊಂಡು ಬಂದಿರುವೆ ನೀನು !

**– ಕೆ. ಎಸ್. ನರಸಿಂಹಸ್ವಾಮಿ**

# ಮುಸ್ಲಿಂ ಸಮಾಜದ ಮಹಿಳೆಯರ ಕೆಲವು ಸಮಸ್ಯೆಗಳು

- ಸಾರಾ ಅಬೂಬಕ್ಕರ್

ಮುಸ್ಲಿಂ ಸಮಾಜದಲ್ಲಿ ಮುಸ್ಲಿಂ ಮಹಿಳೆಯರ ಸ್ವಾತಂತ್ರ್ಯ ಮತ್ತು ಸಮಾನತೆಗಾಗಿ ಹಾಗೂ ಇವರ ಶೋಷಣೆಯ ವಿರುದ್ಧ ಹೋರಾಡುವ ಸ್ತ್ರೀವಾದೀ ದೃಷ್ಟಿಕೋನದಿಂದ ಕಾರ್ಯವೆಸಗುವ ಮಹಿಳಾ ಸಂಘಟನೆಗಳೇನಾದರೂ ಇವೆಯೇ, ಹಾಗೆ ಇದ್ದರೆ ಅವುಗಳ ಕಾರ್ಯ ವೈಖರಿ ಏನು, ವಿದ್ಯಾವಂತರೂ, ಆರ್ಥಿಕಾನುಕೂಲವುಳ್ಳವರೂ ಆದ ಮಹಿಳೆಯರು ಆರ್ಥಿಕವಾಗಿ ಹಿಂದುಳಿದ ಮಹಿಳೆಯರ ಶೋಷಣೆಗೆ ಯಾವ ರೀತಿ ಸ್ಪಂದಿಸಿದ್ದಾರೆ ಮುಂತಾದ ವಿಷಯಗಳ ಕುರಿತು ಚಿಂತಿಸಿದಾಗ ತೀರಾ ನಿರಾಶದಾಯಕವಾದ ಉತ್ತರವೇ ದೊರೆಯುತ್ತದೆ. ಈ ಸ್ಪಂದನದ ಕುರಿತು ಬರೆಯುವ ಮೊದಲು ಮುಸ್ಲಿಂ ಮಹಿಳೆಯರ ಶೋಷಣೆಯ ಒಂದು ಉದಾಹರಣೆ ಕೊಡಬೇಕಾಗಿದೆ.

ಪದವೀಧರೆಯಾದ ಹೆಣ್ಣು ಮಗಳೋರ್ವಳು ಮದುವೆಯಾಗಿ ಇಬ್ಬರು ಗಂಡು ಮಕ್ಕಳ ತಾಯಿಯೂ ಆದಳು. ಆಕೆಯ ಹೆಸರಿನಲ್ಲಿ ಆಕೆಯ ಪಾಲಿಗೆ ಬಂದ ಮೂರು ಮನೆಗಳೂ ಇದ್ದವು. ಮಕ್ಕಳಿಗೀಗ ಎಂಟು ಮತ್ತು ಹನ್ನೆರಡು ವರ್ಷ ಪ್ರಾಯವಾಗಿದೆ. ಕಳೆದ ಒಂದೆರಡು ವರ್ಷಗಳಿಂದ ಆತನು ಆಕೆಯೊಡನೆ ಆ ಮನೆಗಳನ್ನು ತನ್ನ ಹೆಸರಿಗೆ ನೋಂದಣಿ ಮಾಡಬೇಕೆಂದು ಒತ್ತಾಯಿಸತೊಡಗಿದನು. ಆಕೆ ಬಗ್ಗದಿದ್ದಾಗ, "ನಿನಗೆ ಮನೆ ಬೇಕೇ ನಾನು ಬೇಕೇ?" ಎಂದು ಬೆದರಿಸ ತೊಡಗಿದನು. ಮನೆಗಳನ್ನು ಆತನ ಹೆಸರಿಗೆ ನೋಂದಾಯಿಸಿದಿದ್ದರೆ ಆತನು ತನ್ನನ್ನು ಬಿಟ್ಟು ಹೋದಾನೆಂಬ ಭಯದಿಂದ ಆಕೆ ಮೂರು ಮನೆಗಳನ್ನೂ ಆತನ ಹೆಸರಿಗೆ ಬರೆದು ಕೊಟ್ಟಳು. ಮನೆಗಳು ಕೈಗೆ ಬಂದೊಡನೆ ಆತನು ಅವುಗಳೆಲ್ಲವನ್ನೂ ಕೆಲವು ಲಕ್ಷ ರೂಪಾಯಿಗಳಿಗೆ ಮಾರಾಟ ಮಾಡಿ ಇನ್ನೊಂದೂರಿಗೆ ಹೋಗಿ ಇನ್ನೋರ್ವಳನ್ನು ಮದುವೆಯಾದನು. ಒಮ್ಮೆ ಕೊಲ್ಲಿ ರಾಷ್ಟ್ರಕ್ಕೂ ಹೋಗಿ ಬಂದನು. ಇದೇ ಹಣದಲ್ಲಿ ಕಾರು ಕೊಂಡುಕೊಂಡು ಎರಡನೇ ಹೆಂಡತಿಯೊಡನೆ ಸುತ್ತಾಡತೊಡಗಿದನು. ರಾಜಿ ಮಾತುಕತೆಗೆ ಹೋದವರೊಡನೆ "ನೀವು ತಲಾಖ್ ಬೇಕೆಂದು ಕೇಳಿಕೆ ಮುಂದಿಡಿ. ನಾನು ತಲಾಖ್ ಕೊಡುತ್ತೇನೆ (ಹುಡುಗಿಯ ಕಡೆಯವರು ತಲಾಖ್ ಕೇಳಿ ಪಡೆದರೆ ಮೆಹರ್ ನೀಡಬೇಕಾಗಿಲ್ಲ) ನೀವು ಕೋರ್ಟಿಗೆ ಹೋಗಬಾರದು" ಎಂದನು. ಆಕೆಯದೆಲ್ಲವನ್ನೂ ಕಸಿದುಕೊಂಡು, ಆಕೆಯ ಕತ್ತಿಗೆ ಇಬ್ಬರು ಮಕ್ಕಳನ್ನು ಕಟ್ಟಿ, ಆಕೆಯ ಮುಂದಿನ ಬದುಕಿಗೆ ಏನೂ ಹಾದಿ ಮಾಡದೆ ತಾನು ಹೊಸ ಹೆಂಡತಿಯ ಗಂಡನಾಗಿ ಸುಖಿಸುತ್ತಿದ್ದಾನೆ ! 'ಆತ ನನಗೇನೂ ಕೊಡುವುದು ಬೇಡ ; ನನ್ನ ಮಕ್ಕಳ ತಂದೆಯಾಗಿ ಮನೆಗೆ ಬಂದು ಹೋಗುತ್ತಿರಲಿ ನನಗೊಬ್ಬ ಗಂಡನಿದ್ದಾನೆಂದು ಊರವರು ಗುರುತಿಸಿದರೆ ಸಾಕು' ಎನ್ನುವ ಆಕೆಗೆ ಆತನು ಮೇಲಿನಂತೆ ಉತ್ತರಿಸಿದನು.

ಈ ರೀತಿ ಮದುವೆಯಾಗಿ ಹೆಂಡತಿಯ ಮೈಮೇಲಿರುವ ಚೂರುಪಾರು ಒಡವೆಗಳನ್ನು ಮಾರಿ, ಯೌವನ ಮಾಸುವವರೆಗೆ ಆಕೆಯೊಡನೆ ಸುಖಿಸಿ ಎರಡು, ಮೂರು ಅಥವಾ ಐದಾರು ಜನರ ಮಕ್ಕಳನ್ನು ಹುಟ್ಟಿಸಿ ಆಕೆಯ ಕತ್ತಿಗೆ ಕಟ್ಟಿ ಜಾಗ ಖಾಲಿ ಮಾಡಿ ಇನ್ನೋರ್ವಳನ್ನು ಮದುವೆಯಾಗುವ ಗಂಡಂದಿರು ಬಡ ಮುಸ್ಲಿಂ ಕುಟುಂಬಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಇವರ ಮೇಲೆ ಯಾರಿಗೂ ಯಾವ ನಿಯಂತ್ರಣವೂ ಇಲ್ಲ. ಧರ್ಮಗುರುಗಳ ಬಳಿಗೆ ಹೋಗಿ ದೂರು ನೀಡಿದರೆ, 'ನಾಲ್ಕು ಜನ ಹೆಂಡತಿಯರನ್ನಿಟ್ಟುಕೊಳ್ಳಬಹುದೆಂಬುದು ನಮ್ಮ ಧಾರ್ಮಿಕ ನಿಯಮ. ಇದನ್ನು ಪ್ರಶ್ನಿಸುವಂತಿಲ್ಲ. ಮಕ್ಕಳಿಗೆ ಮಾಸಾಶನ ಕೊಡಬೇಕು. ಅದು ಕೊಡದಿದ್ದರೆ ನೀವು ನ್ಯಾಯಾಲಯಕ್ಕೆ ಹೋಗಿ' ಎಂದಷ್ಟೇ ಹೇಳುತ್ತಾರಲ್ಲದೆ ಬೇರೆ ಯಾವ ರೀತಿಯ ಪರಿಹಾರವನ್ನೂ ಸೂಚಿಸುವುದಿಲ್ಲ. ನ್ಯಾಯಾಲಯಕ್ಕೆ ಹೋಗಲು ಬೇಕಾದ ಆರ್ಥಿಕ ಅನುಕೂಲವೂ ಇವರಿಗಿಲ್ಲ ; ಆ ಹಾದಿಯೂ ತಿಳಿಯದು. ಹಾಗೆ ಹೋಗಲು ಬೇಕಾದ ಮಾರ್ಗದರ್ಶನ ನೀಡಿ ಸಹಕರಿಸುವ, ಮುಸ್ಲಿಂ ಮಹಿಳೆಯರದ್ದೇ ಆದ ಸಂಘಟನೆಗಳಂತೂ ಇಲ್ಲವೇ ಇಲ್ಲ. ಮಂಗಳೂರಿನ ಆಸುಪಾಸಿನ ಕೆಲವು ಮುಸ್ಲಿಂ ಮಹಿಳೆಯರು ಹಿಲ್ಡಾರೋಯಪ್ಪನ್ ಅವರು ಸ್ಥಾಪಿಸಿದ 'ಪ್ರಜ್ಞಾ' ಎಂಬ ಕೌನ್ಸಿಲಿಂಗ್ ಕೇಂದ್ರಕ್ಕೆ ಹೋಗಿ ಮಾರ್ಗದರ್ಶನ ಪಡೆಯುತ್ತಾರೆ. ಅವರಿಂದಲೂ ಹೆಚ್ಚಿನ ನೆರವು ನೀಡಲು ಸಾಧ್ಯವಾಗುವುದಿಲ್ಲ. ಮುಸ್ಲಿಂ ವ್ಯಕ್ತಿ ನಿಯಮದಲ್ಲೇ ಇರುವ ಕೆಲವು ತೊಡಕುಗಳ ನಿವಾರಣೆಯಾಗಬೇಕು. ವ್ಯಕ್ತಿ ನಿಯಮದಲ್ಲೇ ಬದಲಾವಣೆಯಾಗಬೇಕು. ಆದರೆ ಮುಸ್ಲಿಂ ಮಹಿಳೆಯರಿಗಾಗಿ ಇಂತಹ ಒಂದು ಬೇಡಿಕೆಯನ್ನು ಈ ಕ್ರೈಸ್ತ ಸಂಘಟನೆ ಮುಂದಿಡುವುದು ಸಾಧ್ಯವಿಲ್ಲ. ಮುಸ್ಲಿಂ ಮಹಿಳೆಯರ ಶೋಷಣೆಯ ವಿರುದ್ಧ ಮುಸ್ಲಿಂ ಮಹಿಳೆಯರೇ ಧ್ವನಿ ಎತ್ತಬೇಕಷ್ಟೆ. ನಿರಕ್ಷರತೆ ಹಾಗೂ ಬಡತನದಿಂದ ಮುರಿಟಿ ಹೋದ ಈ ಹೆಣ್ಣು ಮಕ್ಕಳ ಧ್ವನಿ ಹೊರಗೆ ಕೇಳಿಸುವ ಸಾಧ್ಯತೆಯೂ ಎಲ್ಲಿದೆ?

ಇಂದು ಹೊಸ ಎಚ್ಚರದ ಹಲವು ಧಾರ್ಮಿಕ ಸಂಘಟನೆಗಳು ಮಹಿಳಾ ಶೋಷಣೆಯ ಕುರಿತು ಮಾತನಾಡುತ್ತಾರೆ. ವರದಕ್ಷಿಣೆಯನ್ನು ಮಾತ್ರ ಇವರು ಮಹಿಳಾ ಶೋಷಣೆ ಎಂದು ಗುರುತಿಸುತ್ತಾರೆಯೇ ಹೊರತು ಮುಸ್ಲಿಂ ಮಹಿಳೆಯರ ನಿಜವಾದ ಶೋಷಣೆಯಾದ ಬಹುಪತ್ನಿತ್ವ ಮತ್ತು ತಲಾಖ್‌ನ ಕುರಿತು ಇವರು ಚಕಾರವೆತ್ತುವುದಿಲ್ಲ. ಇವೆಲ್ಲವೂ ಧಾರ್ಮಿಕ ನಿಯಮಗಳೆಂದು ಚಿತ್ರಿಸಲ್ಪಟ್ಟು ಶರಿಯತ್ತಿನ ನೆರಳಿನಲ್ಲಿ ಹುಲುಸಾಗಿ ಬೆಳೆಯುತ್ತವೆ. ಮಗಳ ಮದುವೆಯ ಸಂದರ್ಭದಲ್ಲಿ ವರದಕ್ಷಿಣೆ ನೀಡಿ ನಷ್ಟ ಅನುಭವಿಸುವುದು ತಂದೆಯಾದುದರಿಂದ, ಈ ಹೊರೆ ತಮ್ಮ ಮೇಲೆ ಬೀಳುತ್ತದೆಂದಾಗ ಗಂಡಸರು ಅದರ ವಿರುದ್ಧ ಧ್ವನಿ ಎತ್ತಿದ್ದಾರಷ್ಟೇ ಆದರೆ ಈ ಶೋಷಣೆಯ ವಿರುದ್ಧ ಮಹಿಳೆಯರೇ ಧ್ವನಿ ಎತ್ತುವಂತಹ ಒಂದು ಸೌಲಭ್ಯವೇ ಈ ಸಮಾಜದಲ್ಲಿಲ್ಲ.

ಇಷ್ಟಕ್ಕೂ ವರದಕ್ಷಿಣೆ ಒಂದು ಶೋಷಣೆ ಎನ್ನುವಂತೆಯೂ ಇಲ್ಲ. ಆಸ್ತಿಯಲ್ಲಿ ಪಾಲು ನೀಡಬೇಕೆಂಬ ಧಾರ್ಮಿಕ ನಿಯಮವಿದ್ದರೂ ಹೆಣ್ಣು ಮಕ್ಕಳಿಗೆ ಮದುವೆಯಾದ ಬಳಿಕ ತವರಿನಿಂದ ದೊರೆಯುವುದು ಅಷ್ಟಕ್ಕಷ್ಟೆ ಅಲ್ಲದೆ ವರದಕ್ಷಿಣೆಯ ಹಣವನ್ನು ಸಮವಾಗಿ ವಿನಿಯೋಗಿಸಿ ತಮ್ಮ ಮುಂದಿನ ಬದುಕಿಗೆ ಹಾದಿ ಕಂಡುಕೊಂಡವರೂ ಎಷ್ಟೋ ಜನರಿದ್ದಾರೆ. ತಮಗೆ ತವರಿನಿಂದ ಅಷ್ಟಾದರೂ ಬರಲಿ ಎನ್ನುವ ಹೆಣ್ಣು ಮಕ್ಕಳೂ ಎಷ್ಟೋ ಜನರಿದ್ದಾರೆ.

ಹಾಗೆಯೇ ಇನ್ನೊಂದು ಸಮಸ್ಯೆಯಲ್ಲದ ವಿಷಯವನ್ನೂ ಸಮಸ್ಯೆಯೆಂಬಂತೆ ಚಿತ್ರಿಸಿ ಅದಕ್ಕಾಗಿ ಹೋರಾಟ ನಡೆಸಿದೆಯೆಂದು ಪತ್ರಿಕಾ ಪ್ರಚಾರ ಗಿಟ್ಟಿಸಿಕೊಳ್ಳುತ್ತಾ ಸಮಾಜವನ್ನು ದಾರಿ ತಪ್ಪಿಸುವ ಕೆಲಸವೂ ಮಹಿಳೆಯರ ಮಸೀದಿ ಪ್ರವೇಶದ ಕುರಿತು ಸಾಗುತ್ತಿದೆ.

ಮುಸ್ಲಿಂ ಮಹಿಳೆಯರು ಮಸೀದಿಗೆ ಹೋಗಬಹುದೇ ಬಾರದೇ ಎಂಬುದು ಒಂದು ಸಮಸ್ಯೆಯೇ ಅಲ್ಲ. ಮಸೀದಿ ಎಂಬುದು ಒಂದು ಸಮಾಜ ಭವನದಂತಿರುವುದೇ ಹೊರತು ಅಲ್ಲಿ ವಿಗ್ರಹಗಳೇನೂ ಇರುವುದಿಲ್ಲ. ವಾರಕ್ಕೊಮ್ಮೆ ಎಲ್ಲರೂ ಒಂದೆಡೆ ಸೇರಿ ನಮಾಜು ಮಾಡುವುದು ಭ್ರಾತೃತ್ವ ಕಲ್ಪನೆ ಗಟ್ಟಿಗೊಳ್ಳಲು, ಹಾಗೂ ಸಮಾನತೆ ಕಾಯ್ದುಕೊಳ್ಳಲು ಇರುವ ಒಂದು ಧಾರ್ಮಿಕ ಸಂಪ್ರದಾಯ. ನಮಾಜ್ ಮಸೀದಿಯಲ್ಲೇ ಮಾಡಬೇಕೆಂಬ ಕಡ್ಡಾಯವೂ ಇಲ್ಲ. ದಿನದಲ್ಲಿ ರಾತ್ರಿ, ಬೆಳಗ್ಗೆ ಮತ್ತು ಹಗಲು ಹೊತ್ತಿನಲ್ಲಿ ನಮಾಜ್ ಮಾಡುವುದು ಕಡ್ಡಾಯವೇ ಹೊರತು ಎಲ್ಲಿ ಮಾಡಬೇಕೆಂಬುದು ಮುಖ್ಯವಲ್ಲ. ಆದರೂ ಈ ಹೋರಾಟ ಮಾಡಿದವರೂ ಗಂಡಸರೇ ಆಗಿದ್ದು ಇಂದು ಕೇರಳದಾದ್ಯಂತ ಹಲವಾರು ಮಸೀದಿಗಳಲ್ಲಿ ಶುಕ್ರವಾರ ಹಾಗೂ ಹಬ್ಬದ ದಿನಗಳಲ್ಲಿ ಮಹಿಳೆಯರು ಮಸೀದಿಗೆ ಹೋಗಲಾರಂಬಿಸಿದ್ದಾರೆ. ಇದನ್ನು ಎಡಬಲವುಳ್ಳ ಕನ್ನಡ ಮಹಿಳಾ ಪತ್ರಿಕೆಯೊಂದು, "ಮುಸ್ಲಿಂ ಮಹಿಲೆಯರಿಗೆ ಮಸೀದಿಯ ಬಾಗಿಲು ತೆರೆದಿಟ್ಟದ್ದು ಆತ್ಮವಿಶ್ವಾಸದ ಬಾಗಿಲು ತೆರೆದಂತಾಯಿತು." ಎಂದು ವರ್ಣಿಸಿತು. ಇಂತಹ ಅನಗತ್ಯ ಹೋರಾಟಗಳು ಹೇಗೆ ಮುಸ್ಲಿಮೇತರರನ್ನೂ ಕೂಡಾ ಹಾದಿ ತಪ್ಪಿಸುತ್ತವೆ ಎಂಬುದು ಇದರಿಂದ ಸಾಬೀತಾಯಿತು. ಕೇರಳದಲ್ಲಿ ಈ ಹೋರಾಟ ನಡೆಸಿದ ಸಂಘಟನೆ ಬಹುಪತ್ನಿತ್ವವನ್ನು ವೈಭವೀಕರಿಸಿ ಲೇಖನ ಪ್ರಕಟಿಸುತ್ತಿದೆ. 'ಒಬ್ಬಳ ಸುಖದಲ್ಲಿ ಇನ್ನೊಬ್ಬಳು ಪಾಲು ಪಡೆಯುವುದು' ಎಂದೋ 'ವೇಶ್ಯಾವೃತ್ತಿಗಿಂತ ಓರ್ವನ ಹೆಂಡತಿಯಾಗಿ ಬಾಳುವುದು ಉತ್ತಮ' ಎಂದೋ ಇವರು ತಮ್ಮ ವಾದವನ್ನು ಸಮರ್ಥಿಸಿಕೊಳ್ಳುತ್ತಾರೆ !

ಇಂತಹ ನಿರಾಶಾದಾಯಕ ವಾತಾವರಣದಲ್ಲಿಯೂ ಕೆಲವೊಮ್ಮೆ ಹೊಸ ಬೆಳಕೊಂದು ಹುಟ್ಟಿಕೊಳ್ಳುವುದೂ ಇದೆ. ಪೂನಾದ ಸೈಯದ್ ಭಾಯಿ ಎಂಬುವರು 1982ರಲ್ಲಿ ಕೊಲ್ಲಾಪುರದಲ್ಲಿ ಸಭೆ ಕರೆದು ಮುಸ್ಲೀಂ ಮಹಿಳೆಯರ ಮಾತ್ರವಲ್ಲ ಇಡೀ ಮುಸ್ಲಿಂ ಸಮಾಜದ ಉದ್ಧಾರಕ್ಕಾಗಿ 'ಆಲ್ ಇಂಡಿಯಾ ಪ್ರೊಗ್ರೆಸ್ಸಿವ್ ಮುಸ್ಲಿಂ ಕಾನ್ಫರೆನ್ಸ್' ಎಂಬ ಸಂಘಟನೆಯನ್ನಾರಂಭಿಸಿದರು. ಈ ಸಮಾಜದ ಪಿಡುಗಾಗಿರುವ ಬಹುಪತ್ನಿತ್ವ, ಸುಲಭದ ವಿವಾಹ ವಿಚ್ಛೇದನ ಪದ್ಧತಿ ಮಾತ್ರವಲ್ಲದೆ ಅನಕ್ಷರತೆ, ಬಡತನ ಮುಂತಾಗಿ ಸಾಮಾಜಿಕ ಹಿಂದುಳಿದಿರುವಿಕೆಯ ಕುರಿತು ಮುಸ್ಲಿಂರಲ್ಲಿ ಜಾಗೃತಿ ಮೂಡಿಸುವುದು ಈ. ಸಂಘಟನೆಯ ಉದ್ದೇಶವಾಗಿತ್ತು. ಕರ್ನಾಟಕ, ಮಹಾರಾಷ್ಟ್ರ, ಗೋವಾ, ದೆಹಲಿ ಮುಂತಾದೆಡೆಗಳಿಂದಲೂ ಹಲವಾರು ಸ್ತ್ರೀಪುರುಷರು ಈ ಸಭೆಯಲ್ಲಿ ಭಾಗವಹಿಸಲು ಆಗಮಿಸಿದ್ದರು. ಗೋವಾದಿಂದ ಬಂದಿದ್ದ ರಷೀದ್ ಎಂಬ ಮಹಿಳೆ, ಗೋವಾದ ವ್ಯಕ್ತಿ ನಿಯಮದ ಕುರಿತು ಹೇಳುತ್ತಾ ಅಲ್ಲಿ ಪೋರ್ಚುಗೀಸರು ಜಾರಿಗೆ ತಂದಿದ್ದ ವ್ಯಕ್ತಿ ನಿಯಮವೇ ಈಗಲೂ ಜಾರಿಯಲ್ಲಿದ್ದು ಈ ನಿಯಮದಂತೆ ಎಲ್ಲಾ ವಿವಾಹಗಳು ನೋಂದಣಿಯಾಗಬೇಕಿದ್ದು ಅಲ್ಲಿರುವ ಮುಸ್ಲಿಂರು ಈ ನಿಯಮವನ್ನು ಅನುಸರಿಸುತ್ತಿದ್ದಾರೆಂದರು. ಹೀಗಾಗಿ ಅಲ್ಲಿನ ಮುಸ್ಲಿಂರಲ್ಲಿ ಬಹುಪತ್ನಿತ್ವ ಮತ್ತು ಸುಲಭದ ತಲಾಖ್ ಪದ್ಧತಿ ಇರಲಿಲ್ಲವೆಂದರು. ಮುಸ್ಲಿಂ ವ್ಯಕ್ತಿ ನಿಯಮದಲ್ಲಿ ತಿದ್ದುಪಡಿಯಾಗಿ ಬಾಯಿಮಾತಿನ ತಲಾಖ್ ಪದ್ಧತಿ ರದ್ದಾಗಬೇಕೆಂಬ ನಿರ್ಣಯವನ್ನು ಈ ಸಭೆಯಲ್ಲಿ ಅಂಗೀಕರಿಸಲಾಯಿತು. ಇಡೀ ದೇಶದಲ್ಲಿ ಮುಸ್ಲಿಂ ಮಹಿಳೆಯರಿಗೆ ವೇದಿಕೆಗೆ ಬಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಈ ಸಂಘಟನೆ ಅವಕಾಶ ಒದಗಿಸಿದೆ.

ಇಂತಹ ಸಂಘಟನೆಯೊಂದನ್ನು ಕರ್ನಾಟಕದಲ್ಲಿ ಪ್ರಾರಂಭಿಸುವ ಸಲುವಾಗಿ ಕೆಲವು ಪ್ರಗತಿಪರ ಮುಸ್ಲಿಂರಿಂದ ಮಂಗಳೂರಿನಲ್ಲಿ ಇದರ ಶಾಖೆಯೊಂದನ್ನು ಆರಂಭಿಸಲಾಯಿತು. ಆದರೆ ಮಂಗಳೂರಿನ ಮೂಲಭೂತವಾದಿ ಮುಸ್ಲಿಂರಿಂದಾಗಿ ಇದರ ಉದ್ಘಾಟನೆ ಮತ್ತು ಅಧ್ಯಕ್ಷತೆಗೆ ಒಪ್ಪಿಕೊಂಡ ವಿದ್ಯಾವಂತ ಮುಸ್ಲಿಂ ಪುರುಷರು ಇದರಲ್ಲಿ ಭಾಗವಹಿಸಲಿಲ್ಲ. ಇಲ್ಲಿಯೂ ಬಂದ ಮಹಿಳೆಯರು ಮಾತ್ರ ಬೆರಳೆಣಿಕೆಯಷ್ಟು. ಇದರ ಶಾಖೆಯೊಂದು ಬೆಂಗಳೂರಿನಲ್ಲಿ ರೆಹಮಾನ್ ಖಾನ್ ಎಂಬುವರಿಂದ ಪ್ರಾರಂಭಗೊಂಡಾಗ ಅಲ್ಲಿಯೂ ಮೂಲಭೂತವಾದಿಗಳ ಕಿರುಕುಳವಿತ್ತು. ಆದರೆ ಲೇಖಕರಾದ ಹಸನ್ ಮನ್ಸೂರ್ ಮತ್ತು ಬಷೀರ್ ಅಹ್ಮದ್ ಮುಂತಾದವರು ಈ ಸಭೆಯಲ್ಲಿ ಪಾಲ್ಗೊಂಡರು. ಎಲ್ಲೆಡೆಗೂ ಸೈಯಿದ್ ಭಾಯಿಯವರು ಬಂದು ಮಾರ್ಗದರ್ಶನ ನೀಡಿದರು. ಆದರೆ ಬೆಂಗಳೂರಿನಲ್ಲಿ ಎಷ್ಟೋ ಜನ ವಿದ್ಯಾವಂತ ಮುಸ್ಲಿಂ ಮಹಿಳೆಯರಿದ್ದರು. ಈ ಸಭೆಗೆ ಬಂದು ಭಾಗವಹಿಸಲು ಹಿಂಜರಿದರು. ತಮ್ಮ ಸಮಾಜದ ದುರವಸ್ಥೆಯ ಕುರಿತು ಈ ಮಹಿಳೆಯರಲ್ಲಿ ಸಮನಾದ ತಿಳುವಳಿಕೆಯಿದೆ. ಬಹುಪತ್ನಿತ್ವ ಮತ್ತು ಸುಲಭದ ವಿಚ್ಛೇದನ ಪದ್ಧತಿಯ ಬಿಸಿ ತಟ್ಟಿದ ಎಷ್ಟೋ ಕುಟುಂಬಗಳು ಇಲ್ಲಿವೆ. ವೈಯಕ್ತಿಕವಾಗಿ ಇವರು ಈ ಕುರಿತು ಚಿಂತಿಸುತ್ತಾರೆ. ಆದರೆ ಮುಸ್ಲಿಂ ಮಹಿಳೆಯರದ್ದೇ ಆದ ಒಂದು ಸಂಘಟನೆ ರಚಿಸಿಕೊಂಡು ಈ ಶೋಷಿತ ಮಹಿಳೆಯರ ಪರವಾಗಿ ಹೋರಾಡುವಂತಹ ಧೈರ್ಯ ಪ್ರದರ್ಶಿಸಿದವರು ಯಾರೂ ಇಲ್ಲ.

ಹಾಗಾಗಿ ಸಯ್ಯದ್ ಭಾಯಿಯವರ ಶ್ರಮವೆಲ್ಲವೂ ವ್ಯರ್ಥವಾಯಿತು. ಈ ಸಂಘಟನೆಗೆ ಶ್ರಮಿಸಿದ ರೆಹಮಾನ್ ಖಾನ್ ಅಪಘಾತದಿಂದ ಮೃತಪಟ್ಟ ಬಳಿಕ ಕರ್ನಾಟಕದ ಈ ಸಂಘಟನೆ ಕಣ್ಮರೆಯಾಯಿತು.

ಕರ್ನಾಟಕದಲ್ಲಿ ಯಶಸ್ವಿಯಾಗದ ಸಂಘಟನೆ ತಮಿಳುನಾಡಿನಲ್ಲಿ ಕೊಂಚ ಮಟ್ಟಿಗೆ ಯಶಸ್ವಿಯಾಗಿದೆ. ತಮಿಳುನಾಡಿನ ಮಧುರೈಯಲ್ಲಿ ಪ್ರಾಧ್ಯಾಪಕಿ ನಾಜ್ ನೀನ್ ಎಂಬುವರ ಪ್ರಯತ್ನದಿಂದ ಈ ಸಂಘಟನೆಯ ಶಾಖೆ ಆರಂಭವಾಗಿ ಈಗಲೂ ಕಾರ್ಯನಿರ್ವಹಿಸುತ್ತಿದೆ. ಇವರು ತಲಾಖ್ ಪೀಡಿತರಾದ ಹಲವಾರು ಮಹಿಳೆಯರೊಡನೆ ಜಿಲ್ಲಾಧಿಕಾರಿಗಳ ಕಛೇರಿ ಎದುರು ಧರಣಿ ಕುಳಿತು ಅವರಿಗೆ ಆ ಗಂಡಂದಿರು ಜೀವನಾಂಶ ನೀಡುವಂತೆ ನಿಯಮಗಳ ಬದಲಾವಣೆಯಾಗಬೇಕೆಂಬ ಬೇಡಿಕೆ ಮುಂದಿಟ್ಟಿದ್ದರು. ಅವರೂ ಕೂಡ ಮೂಲಭೂತ ವಾದಿಗಳ ಕಿರುಕುಳವನ್ನು ಅನುಭವಿಸುತ್ತಲೇ ಇದ್ದಾರೆ. ಸ್ಥಳೀಯ ಪತ್ರಿಕೆಯೊಂದು ಇವರನ್ನು ನಿಂದಿಸಿ ಲೇಖನ ಪ್ರಕಟಿಸುವುದಕ್ಕಾಗಿಯೇ ಒಂದು ಅಂಕಣವನ್ನು ಆರಂಭಿಸಿತು ಎನ್ನಲಾಗಿದೆ. ಈ ಸಂಘಟನೆಯ ಉದ್ಘಾಟನೆಯ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಮಾತನಾಡಿದ ಹಫೀಜಾ ಎಂಬ ಮಹಿಳೆ ನ್ಯಾಯವಾದಿಯೊಬ್ಬರು 1986ರ 'ವಿಚ್ಛೇದಿತ ಮುಸ್ಲಿಂ ಮಹಿಳೆಯರ ಹಕ್ಕು ರಕ್ಷಣಾ ಮಸೂದೆ' ಎಂಬ ಮುಸ್ಲಿಂ ಮಹಿಳೆಯರಿಗೆ ತೀರ ಅನ್ಯಾಯ ಮಾಡುವಂತಹ ಮಸೂದೆಯನ್ನು ಪೂರ್ತಿಯಾಗಿ ಹಿಂತೆಗೆದುಕೊಳ್ಳಬೇಕೆಂದು ಸರಕಾರಕ್ಕೆ ಕರೆ ಕೊಟ್ಟಿದ್ದಾರೆ. ಆದರೆ ಆ ಬಳಿಕ ಇವರ ಧ್ವನಿ ಕೇಳಿಸಲಿಲ್ಲ.

1982ರಲ್ಲಿ ಎ.ಐ.ಡಿ.ಎಂ.ಕೆ. ಪಕ್ಷದ ರಾಜ್ಯ ಸಭಾ ಸದಸ್ಯೆಯಾಗಿದ್ದ ನೂರ ಜಹಾನ್ ರಜಾಕ್ ಎಂಬ ಮಹಿಳೆ ರಾಜ್ಯಸಭೆಯಲ್ಲಿ ಮುಸ್ಲಿಂ ಮಹಿಳೆಯರ ವಿಷಯವನ್ನು ಎತ್ತಿ ಮುಸ್ಲಿಂರ ಬಹುಪತ್ನಿತ್ವ ಮತ್ತು ಬಾಯಿಮಾತಿನ ತಲಾಖ್ ಎಂಬ ಈ ಎರಡೂ ನಿಯಮಗಳನ್ನು ಬದಲಾಯಿಸಿ ಭಾರತದ ಎಲ್ಲಾ ಮಹಿಳೆಯರಿಗೂ ಅನ್ವಯವಾಗುವಂತಹ ಸಮಾನ ನಾಗರೀಕ ಕಾನೂನನ್ನು ಜಾರಿಗೊಳಿಸಬೇಕೆಂದು ವಾದ ಮಂಡಿಸಿದರು. ಇವರು ಕೂಡಾ ಚೆನ್ನೈನಲ್ಲಿ ವಕೀಲಿ ವೃತ್ತಿಯಲ್ಲಿದ್ದವರು. ಆ ಬಳಿಕ ಇವರ ಧ್ವನಿಯೂ ಕೇಳಿ ಬರಲಿಲ್ಲ. 1993ರಲ್ಲಿ ಉತ್ತರ ಪ್ರದೇಶದ ಒಂದು ಮುಸ್ಲಿಂ ಸಂಘಟನೆ ಒಂದು ಫತ್ವಾ (ಧಾರ್ಮಿಕ ಆಜ್ಞೆ) ಹೊರಡಿಸಿ ಒಂದೇ ಬಾರಿ ಮೂರು ತಲಾಖ್ ಹೇಳಿದರೂ ಅದು ಒಂದೇ ತಲಾಖ್ ಎಂದು ಪರಿಗಣಿಸಬೇಕೆಂದೂ, ಮೂರು ತಿಂಗಳಲ್ಲಿ ಪ್ರತ್ಯೇಕವಾಗಿ ಮೂರು ತಲಾಖ್ ಹೇಳಿದಾಗ ಮಾತ್ರ ಪೂರ್ತಿ ವಿಚ್ಛೇದನವೆಂದು ಪರಿಗಣಿಸಬೇಕೆಂದೂ ಆಜ್ಞೆ ಹೊರಡಿಸಿತು. ದೆಹಲಿಯ ಅಖಿಲ ಭಾರತ ಮುಸ್ಲಿಂ ಮಹಿಳಾ ಸಂಘಟನೆ ಶ್ರೀಮತಿ ಹುಸ್ನಾ ಸುಭಾನಿ ಎಂಬುವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಪತ್ರಿಕಾಗೋಷ್ಠಿ ಕರೆದು ಈ ಫತ್ವಾವನ್ನು ಸುಭಾನಿ ಎಂಬುವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಪತ್ರಿಕಾಗೋಷ್ಠಿ ಕರೆದು ಈ ಫತ್ವಾವನ್ನು ಸ್ವಾಗತಿಸುತ್ತಾ, ಮುಸ್ಲಿಂ ಪರ್ಸನಲ್ ಲಾ ಬೋರ್ಡ್ ಈ ಫತ್ವಾವನ್ನು ಜಾರಿಗೊಳಿಸದಿದ್ದಲ್ಲಿ ಇಡೀ ದೇಶದಲ್ಲಿ ಪ್ರಬಲವಾದ ಚಳುವಳಿ ನಡೆಸುವ ಬೆದರಿಕೆ ಹಾಕಿತು. ಮುಸ್ಲಿಂ ಮಹಿಳೆಯರಲ್ಲೂ ಜಾಗೃತಿ ಮೂಡುತ್ತಿದೆ, ತಮ್ಮ ಹಕ್ಕುಗಳಿಗಾಗಿ ಹೋರಾಡಲಾರಂಭಿಸಿದ್ದಾರೆ ಎಂದುಕೊಂಡರೂ ಈ ಒಂದು ಪತ್ರಿಕಾಗೋಷ್ಠಿಗೆ ಈ ಸಂಘಟನೆ ಮುಕ್ತಾಯವಾಯಿತು. ಆ ಬಳಿಕ ಇವರ ಧ್ವನಿ ಎಲ್ಲೂ ಕೇಳಿ ಬರಲಿಲ್ಲ. ಈಗ ಏಳು ವರ್ಷಗಳ ಬಳಿಕವೂ ಮುಸ್ಲಿಂ ಪರ್ಸನಲ್ ಲಾ ಬೋರ್ಡ್ ತನ್ನ ನಿಯಮಗಳಲ್ಲಿ ಯಾವ ಮಾರ್ಪಾಟನ್ನೂ ಮಾಡಿಲ್ಲ . ಇಡೀ ಭಾರತಾದ್ಯಂತ ಮುಸ್ಲಿಂ ಮಹಿಳೆಯರು ಪುರುಷ ಪ್ರಧಾನ ಸಮಾಜದಲ್ಲಿ ಧ್ವನಿ ಕಳೆದುಕೊಂಡವರಾಗಿ ಎಲ್ಲಾ ರೀತಿಯ ಶೋಷಣೆಗಳಿಗೂ ತುತ್ತಾಗುತ್ತಿದ್ದಾರೆ. ಆರ್ಥಿಕ ಸ್ವಾವಲಂಬನೆಯನ್ನಂತೂ. ಇವರು ಕನಸಿನಲ್ಲೂ ಊಹಿಸುವುದು ಸಾಧ್ಯವಿಲ್ಲ.

ಶಹಾಬಾನು ಪ್ರಕರಣದಲ್ಲಿ ಶ್ರೇಷ್ಠ ನ್ಯಾಯಾಲಯದ ತೀರ್ಪನ್ನು ಸ್ವಾಗತಿಸಿ ಮುಸ್ಲಿಂ ಮಹಿಳೆಯರ ಪರವಾಗಿ ನಿಂತ ಯುವ ರಾಜಕಾರಣಿ ಅರೀಫ್ ಮಹಮ್ಮದ್ ಖಾನ್ ಆ ಬಳಿಕ ರಾಜಕೀಯವಾಗಿ ಮೇಲೇರಲು ಸಾಧ್ಯವಾಗಲಿಲ್ಲ. ಹಲವಾರು ವರ್ಷಗಳಿಂದ ರಾಜ್ಯಸಭಾ ಸದಸ್ಯೆಯಾಗಿ, ರಾಜ್ಯಸಭಾ ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ನಜ್ಮಾ ಹೆಪ್ತುಲ್ಲಾ ಈವರೆಗೆ ಮುಸ್ಲಿಂ ಮಹಿಳೆಯರ ಶೋಷಣೆಗಳ ವಿರುದ್ಧ ಒಂದೇ ಒಂದು ಮಾತನ್ನು ಆಡಿಲ್ಲ ! ಸಂಸತ್ ಸದಸ್ಯರಾಗಿದ್ದ ಶ್ರೀಮತಿ ಅಬೀದಾ ಅಹಮ್ಮದ್ ಕೂಡಾ ಈ ಕುರಿತು ಬಾಯಿ ತೆರೆಯಲೇ ಇಲ್ಲ. ವೃತ್ತಿನಿರತರೂ ಮತ್ತು ಕುರ್ಚಿಗೆ ಅಂಟಿಕೊಂಡವರೂ ಯಾವಾಗಲೂ ತಮ್ಮ ತಳಭದ್ರ ಮಾಡಿಕೊಳ್ಳುವತ್ತಲೇ ತಮ್ಮ ಗಮನವನ್ನು ಕೇಂದ್ರೀಕರಿಸಿಕೊಳ್ಳುತ್ತಾರೆಯೇ ಹೊರತು ಅನರಕ್ಷಸ್ಥ ಬಡಜನರ ಹಿತಾಸಕ್ತಿ ಕಾಪಾಡುವುದು ಇವರಿಗೆ ಮುಖ್ಯವೆನಿಸುವುದಿಲ್ಲ.

ಸ್ತ್ರೀವಾದ, ಸಮಾನತೆ, ಮಹಿಳಾ ಸ್ವತಂತ್ರ್ಯ ಮುಂತಾದ ಶಬ್ದಗಳು ಬಡ ಮುಸ್ಲಿಂ ಮಹಿಳೆಯರ ಶಬ್ದಕೋಶದಲ್ಲಿ ಇಲ್ಲದ ಪದಗಳು. ಓರ್ವ ಮಹಿಳೆಯು ಈ ಕುರಿತು ಧ್ವನಿ ಎತ್ತುತ್ತಾಳೆ, ಮಹಿಳೆಯರಲ್ಲಿ ಜಾಗೃತಿ ಮೂಡಿಸಬಹುದು ; ಸಂಘಟನೆಯೊಂದು ರೂಪು ತಳೆಯಬಹುದು ಎಂಬ ಸೂಚನೆ ದೊರೆತೊಡನೆ ಈ ಸಮಾಜದ ಪುರುಷರು ಆಕೆಯ ಧ್ವನಿ ಅಡಗಿಸಲು ಬೇಕಾದ ಎಲ್ಲಾ ರೀತಿಯ ಅಪಪ್ರಚಾರಗಳನ್ನು ತಮ್ಮ ಪತ್ರಿಕೆಗಳ ಮೂಲಕ ಕೈಗೊಳ್ಳುತ್ತಾರೆ. "ಆಕೆ ಮುಸ್ಲಿಂಳೇ ಅಲ್ಲ; ಆಕೆ ಮತಾಂತರಗೊಂಡವು ಅಥವಾ ನಾಮಧಾರಿ ಮುಸ್ಲಿಂ" ಎಂಬುದು ಇವರ ಪ್ರಚಾರದ ಒಂದು ಮಾದರಿ. ಧರ್ಮಾಂಧತೆ ಮತ್ತು ಮೂಢನಂಬಿಕೆಯಲ್ಲಿ ಮುಳುಗಿದ ಅನಕ್ಷರಸ್ಥ ಮುಸ್ಲಿಂರಿಗೆ ಅಷ್ಟೇ ಸಾಕು. ಬಳಿಕ ಆಕೆಯಲ್ಲಿ ಈ ಜನರಿಗೆ ವಿಶ್ವಾಸ ಮೂಡದು. ಅಂತಹ ಮಹಿಳೆಯೋರ್ವಳನ್ನು ಮೆಟ್ಟಿ ತುಳಿಯಲು ಇನ್ನೋರ್ವ ಮಹಿಳೆಯನ್ನು ಉಪಯೋಗಿಸುವ ಕುತಂತ್ರವೂ ಇವರಲ್ಲಿದೆ ಅಥವಾ ಮಹಿಳೆಯರ ಶಕ್ತಿಮುರಿಯಲು ಮಹಿಳೆಯರನ್ನೇ ಉಪಯೋಗಿಸುವುದು ಇದೆ. ಕೇರಳದ ಪ್ರಖ್ಯಾತ ಕವಿಯಿತ್ರಿ,

ಲೇಖಕಿ ಸುಗತಾ ಕುಮಾರಿಯವರು ಕೋಝಿಕೋಡಿನಲ್ಲಿ ಮುಸ್ಲಿಂ ಮಹಿಳೆಯರ ಶೋಷಣೆ ಕುರಿತು ಮಾತನಾಡತೊಡಗಿದಾಗ ಅದನ್ನು ವಿರೋಧಿಸಿ ಪ್ರತಿಭಟನೆ ಮಾಡಿ ಅವರು ಭಾಷಣ ಮಾಡದಂತೆ ತಡೆದವರು ಮುಸ್ಲಿಂ ಮಹಿಳೆಯರೇ ಆಗಿದ್ದಾರೆ.

ಕಡುಕಪ್ಪು ಕತ್ತಲಿನ ಮೂಲೆಗೆ ಒಂದಷ್ಟು ಬೆಳಕು ಬೀರುವುದನ್ನು ಈ ಜನರು ಸಹಿಸಲಾರರು. "ನಮ್ಮ ಮಹಿಳೆಯರು ನಾಲ್ಕು ಗೋಡೆಗಳೊಳಗೆ ಸುಖವಾಗಿದ್ದಾರೆ ಅವರಿಗೆ ಬೇಕಾದಷ್ಟು ಸ್ವಾತಂತ್ರ್ಯ ನೀಡಿದ್ದೇವೆ" ಎಂದು ನಂಬಿಸುತ್ತಾ ಅವರನ್ನು ಹಗಲಿರುಳು ತಮ್ಮ ಮುಷ್ಟಿಯಲ್ಲಿ ಬಂಧಿಸಿಡುವುದೇ .ಇವರ ಗುರಿಯಾಗಿದೆ. ಎಚ್ಚರ ಮೂಡಿದ ಮಹಿಳೆ ನಿಯಮಗಳನ್ನು ಪ್ರಶ್ನಿಸದಿರಲಾರಳು ಎಂಬುದು ಇವರಿಗೆ ಮನವರಿಕೆಯಾಗಿದೆ. ಅಂತಹ ಎಚ್ಚರ ಮೂಡದಂತೆ ಜಾಗ್ರತೆ ವಹಿಸುವುದೇ ಈ ಸಮಾಜದ ಪುರುಸರ ಉದ್ದೇಶವಾಗಿದೆ.

*ಭಾರತದ ಸಂವಿಧಾನ ಸರ್ವರಿಗೂ ಸಮಾನತೆ ನೀಡುತ್ತಿದೆ. ಜಾತಿ, ಧರ್ಮ, ಹಾಗೂ ಲಿಂಗದ ಆಧಾರದಲ್ಲಿ ತಾರತಮ್ಯ ಮಾಡುವುದನ್ನು ಸಂವಿಧಾನ ನಿಷೇಧಿಸಿದೆ. ಭಾರತದ ಸಂವಿಧಾನ ಮತ್ತು ಪ್ರಜಾಸತ್ತೆಗೆ ಜಾಗತಿಕ ಮನ್ನಣೆ ಇದೆ. ಆದರೆ ಅದೇ ಸಂವಿಧಾನವು ಪ್ರತಿಯೊಬ್ಬರು ಧಾರ್ಮಿಕ ಸ್ವಾತಂತ್ರ್ಯವನ್ನೂ ಎತ್ತಿ ಹಿಡಿಯುತ್ತದೆ. ಧಾರ್ಮಿಕ ಸ್ವಾತಂತ್ರ್ಯದ ಈ ಅವಕಾಶದಿಂದಾಗಿ ಮಹಿಳೆಯರಿಗೆ ಸಂವಿಧಾನ ನೀಡಿದ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಸಮಾಜವು ಧರ್ಮದ ಹೆಸರಿನಲ್ಲಿ ಕಿತ್ತುಕೊಳ್ಳುತ್ತದೆ. ಮಹಿಳಾ ಸ್ವಾತಂತ್ರ್ಯ, ಸಮಾನತೆ, ಸ್ತ್ರೀವಾದಿ ಮುಂತಾದ ಪದಗಳೆಲ್ಲವೂ ಧಾರ್ಮಿಕ ಸ್ವಾತಂತ್ರ್ಯ ಹಾಗೂ ಪ್ರತ್ಯೇಕ ವ್ಯಕ್ತಿನಿಯಮದ ಅಡಿಯಲ್ಲಿ ಹೂತುಹೋಗುತ್ತವೆ.*

ತಮ್ಮ ಮನೆಗಳಲ್ಲೇ ಮಗಳ ವಿಚ್ಛೇದನವಾದಾಗ ಅಥವಾ ಅಳಿಯ ಬೇರೊಬ್ಬಳನ್ನು ಮದುವೆಯಾಗಿ ಮಗಳು ಮತ್ತು ಮೊಮ್ಮಕ್ಕಳ ಭಾರ ತಮ್ಮ ಕುತ್ತಿಗೆಗೆ ಬಿದ್ದಾಗ ಅಂತಹವರು ನಮ್ಮ ಬಳಿ ಬಂದು ತಮ್ಮ ಸಂಕಷ್ಟ ತಿಳಿಸಿ ಪರಿಹಾರಕ್ಕೆ ಸಲಹೆ ಕೇಳಿದ್ದಿದೆ. ಕೆಲವು ಜನ ಮೌಲವಿಗಳೂ ತಮ್ಮ ಮನೆಗಳಲ್ಲಿ ಇಂತಹ ಘಟನೆಗಳು ನಡೆದಾಗ ಈ ಕುರಿತು ನನ್ನ ಸಲಹೆ ಕೇಳಿದ್ದಾರೆ. "ಎಲ್ಲಾ ಮದುವೆಗಳನ್ನು ನೋಂದಣಿ ಮಾಡಿಸಿ" ಎಂಬ ಸಲಹೆಯನ್ನು ನಾನು ಈವರೆಗೆ ನೀಡುತ್ತಾ ಬಂದಿದ್ದೇನೆ. ವೈಯಕ್ತಿಕವಾಗಿ ನನ್ನ ಹೋರಾಟ, ವಿಚಾರಧಾರೆ ಎಲ್ಲರಿಗೂ ಮೆಚ್ಚಿಕೆಯೇ. "ಬರಹದ ಮೂಲಕ ನಿಮ್ಮ ಹೋರಾಟವನ್ನು ಮುಂದುವರಿಸಿ" ಎಂಬ ಸಲಹೆಯನ್ನು ನನಗೂ ನೀಡುತ್ತಾರೆ. ಆದರೆ ಸಾಮೂಹಿಕವಾಗಿ ನಮ್ಮ ಪುರುಷರು ಮಹಿಳೆಯರ ಪ್ರಗತಿಯನ್ನು, ಮುಖ್ಯವಾಗಿ ಆರ್ಥಿಕವಾಗಿ ಸ್ವಾವಲಂಬನೆಯನ್ನು ಒಪ್ಪಿಕೊಳ್ಳುವ ಮನಸ್ಥಿತಿಯಲ್ಲಿಲ್ಲ. ಹಾಗಾಗಿಯೇ ಇಂದು ಸುಶಿಕ್ಷಿತ ಮುಸ್ಲಿಂ ಮಹಿಳೆಯರು ತಮ್ಮದೇ ಆದ ಸಂಘಟನೆ ಕಟ್ಟಿಕೊಂಡು ಸ್ತ್ರೀಯರ ಸಾಂವಿಧಾನಿಕ ಹಕ್ಕುಗಳಿಗಾಗಿ ಹೋರಾಟ ನಡೆಸುವ, ಪ್ರವಾಹ ವಿರುದ್ಧ ಈಜುವ ಸ್ಥೈರ್ಯ ತೋರಬೇಕಾಗಿದೆ.

***ಕೃಪೆ : ಮಹಿಳಾ ಅಧ್ಯಯನ, ಜನವರಿ, 2001***

## ಬುರ್ಖಾ ಪ್ಯಾರಡೈಸ್

ಬೇಸರದ ಹೆಜ್ಜೆ ಹಾಕುತ್ತ
ಪೇಟೆಯಲ್ಲಿ ಸಾಗುತ್ತಿದ್ದೆ
ಝುಗಝುಗಿಸುವ ಬೆಳಕು
ಕತ್ತಲೆಯನು ಹೊಡೆದೋಡಿಸಿತ್ತು
ಜನ ಜಂಗುಳಿಯ ನಡುವೆ
ಚಿಲ್ಲರೆ ವ್ಯಾಪಾರಿಗಳು
ಬೀದಿ ಬದಿಗೆ ಕೂತಿದ್ದರು
ಲೈಟಿನ ವಿನ್ಯಾಸ ಬಣ್ಣಬಣ್ಣದಲಿ
ತಿರುಗುವ ಮಾದರಿ ಬೆಳಕು
ನನಗೆ ಆ ಅಂಗಡಿಯ
ಮುಂದೆ ಹಿಡಿದು ನಿಲ್ಲಿಸಿತ್ತು.
ಬೋರ್ಡಿನಲಿ ಬರೆದಿತ್ತು
"ಬುರ್ಖಾ ಪ್ಯಾರಡೈಸ್"
ಟಿವಿಯಲಿ ನೋಡಿದ್ದ ಪ್ರಚಾರ
ಬನ್ನಿ ಮಹಿಳೆಯರೇ
ಪವಿತ್ರ ಉಡುಪು ಖರೀದಿಸಲು
"ನಮ್ಮ ಬುರ್ಖಾತೊಟ್ಟ ಮಹಿಳೆ
ಸ್ವರ್ಗದಪ್ಸರೆಯಂತೆ"
"ಜನ್ನ ತೆ-ಕಿ-ಹೂರ್"
ಹೇಗಿದೆ ಪ್ರಚಾರ ತಂತ್ರ?

ಬನ್ನಿ ವಿನ್ಯಾಸಗಳು ಬಹಳಿವೆ
ಹೆಣ್ಣುಗಳ ಕಣ್ಮನ ಸೆಳೆವ
ಕುಸುರಿ ಕೆಲಸ ಕನಸುಗಳಿಗೆ
ರೆಕ್ಕೆ ಬಿಡಿಸಿದ ಚಿತ್ತಾರಗಳಿವೆ
ಬಿಚ್ಚಿಕೊಂಡಿದೆ ಚಾದರದಲಿ
ಜಡ್ಡುಗಟ್ಟಿದ ಪಳೆಯುಳಿಕೆಗಳು
ಮನಮೋಹಕ ತಂತ್ರಗಳಲ್ಲಿ

ಹುದುಗಿಕೊಂಡಿದೆ ವ್ಯಾಪಾರೀವೃತ್ತ
ಲಾಭ ಗಿಟ್ಟಿಸಲು ಬಂಡಾವಾಳಕೆ
ವಿನೂತನ ಪ್ರಚಾರ ವೈಖರಿ
ಖರೀದಿಗೆ ಆಹ್ವಾನಿಸುತ್ತವೆ
"ಬನ್ನಿ ನಿಮ್ಮ ಪ್ಯಾರಡೈಸ್‌ಗೆ
ಬುರ್ಖಾಧಾರಿ ಹುಡುಗಿಯರಿದ್ದಾರೆ
ನಿಮ್ಮ ಸ್ವಾಗತಕ್ಕೆ
ಪುರುಷರ ನೆರಳೂ ಅಲ್ಲಿಲ್ಲ
ಎಲ್ಲಾ ಮಹಿಳೆಯರದೇ ಜಗತ್ತು
ಕೇವಲ ಲಾಭ ಮಾತ್ರ ನಮಗೆ ಸೇರಿದ್ದು
ಬಂಡವಾಳ ಹೂಡಿರುವೆವಲ್ಲ?

***- ಕೆ. ಶರೀಫಾ***

# ಕರ್ನಾಟಕ - ಉತ್ಕೃಷ್ಟ ಕಲೆ, ಸಾಹಿತ್ಯ, ಸಂಸ್ಕೃತಿಗಳ ಬೀಡು,
# ಕರ್ನಾಟಕ ರಾಜ್ಯೋತ್ಸವ - ಜನಮಾನಸದ ಉತ್ಸವ

ನವೆಂಬರ್ 1, 1956ರ ಕನ್ನಡ ನಾಡಿನ ಇತಿಹಾಸ ಸುವರ್ಣಾಕ್ಷರಗಳ ಪುಟ. ವಿವಿಧ ಪ್ರಾಂತ್ಯಗಳಲ್ಲಿ ಹರಿದು ಹಂಚಿಹೋಗಿದ್ದ ಈ ನಾಡಿನ ಏಕೀಕರಣಕ್ಕಾಗಿ ಧೀಮಂತ ಕನ್ನಡಿಗರು ಹಗಲಿರುಳು ದುಡಿದರು. ಅವರ ಪರಿಶ್ರಮದ ಫಲವೇ ವಿಶಾಲ ಕರ್ನಾಟಕದ ಉದಯ. ಸಾವಿರಾರು ವರ್ಷಗಳ ಶ್ರೇಷ್ಠ ಸಂಸ್ಕೃತಿ, ಶ್ರೀಮಂತ ಕಲೆ, ಅನುಪಮ ಸಾಹಿತ್ಯ ಭಂಡಾರ ಹೊಂದಿರುವ ಕರ್ನಾಟಕ ವೈಭವವನ್ನು ದೇಶದ ಉದ್ದಗಲಕ್ಕೂ ಮೆರೆಸಿದ ಕನ್ನಡಿಗರ ಕೊಡುಗೆ ಅಪಾರ. ಸಾಮಾಜಿಕ ಸಮಾನತೆ. ಹೃದಯ ವೈಶಾಲ್ಯತೆಯನ್ನು ಮೂಲ ಸೆಲೆಯಾಗಿ ಮೂಡಿಬಂದ ಈ ನಾಡಿನ ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯಗಳು ಸದಾ ಪ್ರಸ್ತುತ. ಅವು ಮನುಕುಲಕ್ಕೆ ನೀಡಿದ ಅಭೂತಪೂರ್ವ ಕೊಡುಗೆಗಳು.

ದೇಶದ ಕಲೆ, ಸಾಹಿತ್ಯ, ಕ್ರೀಡೆ, ವಿಜ್ಞಾನ ತಂತ್ರಜ್ಞಾನಗಳಂತ ಮಹತ್ತರ ರಂಗಗಳಲ್ಲಿ ಮಹೋನ್ನತ ಕಾಣಿಕೆ ನೀಡಿದ ಕರ್ನಾಟಕವನ್ನು ಮತ್ತಷ್ಟು ಸಮೃದ್ಧಗೊಳಿಸಬೇಕೆಂಬುದೇ ಸರ್ಕಾರದ ದೃಢ ಸಂಕಲ್ಪ, ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಒತ್ತು ನೀಡಿರುವ ಸರ್ಕಾರ ಉತ್ತರ ಕರ್ನಾಟಕದ ಸರ್ವಾಂಗೀಣ ಅಭಿವೃದ್ಧಿಗೆ ಅತ್ಯಂತ ಪ್ರಾಶಸ್ತ್ಯನೀಡಿ ಕಾರ್ಯಪ್ರವೃತ್ತವಾಗಿವೆ. ಇದಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸಲಾಗುತ್ತಿದೆ.

ಸಾಂಸ್ಕೃತಿಕ ಪರಂಪರೆಯ ಘೋಷಣೆ

ಕಲೆ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಅಪ್ರತಿಮ ಸೇವೆ ಸಲ್ಲಿಸಿದ ಕಲಾವಿದ ಮಾಸಾಶನ 250/-ರಿಂದ 500/- ರೂ.ಗಳಿಗೆ ಏರಿಕೆ. ★ ಯುವಜನಾಂಗದಲ್ಲಿ ಸಾಂಸ್ಕೃತಿಕ ಜಾಗೃತಿ ಮೂಡಿಸಲು ಯುವ ಪ್ರತಿಭೆ. ಯುವ ಸ್ಪಂದನ ವಿಶೇಷ ಕಾರ್ಯಕ್ರಮಗಳು. ★ ಎಲ್ಲ ಕಲೆಗಳನ್ನು ಒಂದೇ ಸೂರಿನಡಿ ತರುವ ಕಲಾಗ್ರಾಮ ಯೋಜನೆ ★ ಸಮಗ್ರ ದಾಸ ಸಾಹಿತ್ಯ ಹಾಗೂ ವಚನ ಸಾಹಿತ್ಯವನ್ನು ಮುದ್ರಣ, ಸಂಗೀತ ಹಾಗೂ ಅಂತರ್ಜಾಲ ಮೂಲಕ ಜಗತ್ತಿಗೆ. ಪರಿಚಯಿಸುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ★ ರಾಷ್ಟ್ರಕವಿ ಕುವೆಂಪು ಶತಮಾನೋತ್ಸವವನ್ನು ಮುಂದಿನ ವರ್ಷ ಅತ್ಯಂತ ಅರ್ಥಪೂರ್ಣ ಆಚರಣೆಗೆ ಕ್ರಮ. ರೋರಿಕ್ ಶತಮಾನೋತ್ಸವ ಆಚರಣೆಗೆ ಚಾಲನೆ. ★ ಕನ್ನಡಿಗರ ಹೆಮ್ಮೆಯ ಕನ್ನಡ ಭವನದ 2ನೇ ಹಂತ ಚಾಲುಕ್ಯ ವಿಭಾಗದ ಸಮರ್ಪಣೆ ★ ಏಕೀಕೃತ ಕರ್ನಾಟಕ ಸುವರ್ಣ ಹಬ್ಬವನ್ನು 2006ರಲ್ಲಿ ಅತ್ಯಂತ ವಿಜೃಂಭಣೆಯಿಂದ ಆಚರಿಸುವ ಬೃಹತ್ ಕಾರ್ಯಕ್ರಮ. ಈ ನಿಟ್ಟಿನಲ್ಲಿ ಸುರ್ವಣ ಸಂಸ್ಕೃತಿ ಸಮುಚ್ಚಯಗಳ ನಿರ್ಮಾಣ. ಸುವರ್ಣ ಗೆಜೆಟಿಯರ್ ಪ್ರಕಟಣೆ. ಸುವರ್ಣ ಸಂಸ್ಕೃತಿ ದರ್ಶಿಕೆ ಇತ್ಯಾದಿ ಯೋಜನೆಗಳ ಅನುಷ್ಠಾನ. ★ ವಿವಿಧ ಕ್ಷೇತ್ರದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದ ಗಣ್ಯರಿಗೆ ರಾಜ್ಯೋತ್ಸವ ದಿನದಂದು ರಾಜ್ಯ ಪ್ರಶಸ್ತಿ ಪ್ರಧಾನ. ★ ಪ್ರಾಚ್ಯವಸ್ತುಗಳ ಡೈರೆಕ್ಟರಿ ಮೂಲಕ ರಾಜ್ಯದ 3.000ಕಮ್ಮೂ ಹೆಚ್ಚು ಐತಿಹಾಸಿಕ ಸ್ಮಾರಕಗಳು 20,000 ಇತರೆ ಸ್ಮಾರಕಗಳು ಹಾಗೂ ಎಲ್ಲ ವಸ್ತುಸಂಗ್ರಹಾಲಯಗಳ ಬಗ್ಗೆ ಮಾಹಿತಿ ಹಾಗೂ ಛಾಯಾಚಿತ್ರಗಳು ಕಂಪ್ಯೂಟರ್‌ನಲ್ಲಿ ಅಳವಡಿಕೆ. ಇನ್‌ಟಾಕ್‌ನವರ ಸಹಯೋಗದೊಂದಿಗೆ 21 ಸ್ಮಾರಕಗಳ ಸೌಂದರ್ಯ ವರ್ಧನೆ. ಸ್ಮಾರಕಗಳ ಸಂರಕ್ಷಣೆಯಲ್ಲಿ ಖಾಸಗಿಯವರ ಸಹಭಾಗಿತ್ವದ ಅಂಗವಾಗಿ ಧರ್ಮಸ್ಥಳ ಧರ್ಮೋತ್ಥಾನ ಪರಿಷತ್‌ನೊಂದಿಗೆ 18 ಸ್ಮಾರಕಗಳ ಜೀರ್ಣೋದ್ದಾರ. ಕನ್ನಡಕ್ಕೆ ಹೆಚ್ಚಿನ ಒತ್ತಾಸೆ ★ 1ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ಬಿ.ಇ. ಎಂ.ಬಿ.ಬಿ.ಎಸ್. ಮತ್ತು ಬಿ.ಡಿ.ಎಸ್. ಕೋರ್ಸುಗಳ ಪ್ರವೇಶದಲ್ಲಿ ಶೇ. 5ರಷ್ಟು ಸಮಾಂತರ ಒಳಮೀಸಲಾಗಿ. ★ ವೃತ್ತಿ ಶಿಕ್ಷಣ ಉನ್ನತ ಶಿಕ್ಷಣದ ಇತರೆ ಕೋರ್ಸ್‌ಗಳಿಗೂ ಶೇ. 5ರಷ್ಟು ಸಮಾನಾಂತರ ಮೀಸಲಾತಿಯ ವಿಸ್ತರಣೆ. 1ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಸರಕಾರಿ ಉದ್ಯೋಗಗಳಲ್ಲಿ ಶೇ. 5ರಷ್ಟು ಸಮಾನಾಂತರ ಒಳಮೀಸಲಾತಿ. ತಾಂತ್ರಿಕ ಮತ್ತು ವೈದ್ಯಕೀಯ ಪದವಿ ಕೋರ್ಸುಗಳಲ್ಲಿ ಮೊದಲ ವರ್ಷದಲ್ಲಿ ಪಠ್ಯ ವಿಷಯವಾಗಿ ಕನ್ನಡದ ಅಳವಡಿಕೆ. ಪದವಿ ಪೂರ್ವ ತರಗತಿಯಲ್ಲಿ ಐಚ್ಛಿಕ ಕನ್ನಡ ವಿಷಯ ಪ್ರಾರಂಭ. ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಕನ್ನಡ ಅನುಷ್ಠಾನ ವಿಭಾಗ. ಕನ್ನಡ ಭಾಷೆ ಕಲಿಕೆಗೆ ಸಹಾಯ ಮಾಡಲು ಮತ್ತು ಗಣಕ ಯಂತ್ರದಲ್ಲಿ ಕನ್ನಡ ಬಳಕೆಗೆ ಉಚಿತ ಕನ್ನಡ ಸಾಫ್ಟ್‌ವೇರ್‌ಗಳ ಬಿಡುಗಡೆ.

ಕರ್ನಾಟಕ ವಾರ್ತೆ

# "ಧರ್ಮ - ಕಾನೂನು - ಆಗ - ಈಗ"

– ಎಸ್. ಸುಶೀಲಾ ಚಿಂತಾಮಣಿ

ಮಹಾಭಾರತದ ಕಾಲ. ಶಕುಂತಲೆ ದುಷ್ಯಂತನನ್ನು ಗಾಂಧರ್ವ ರೀತಿಯಲ್ಲಿ ವಿವಾಹವಾಗುತ್ತಾಳೆ. ಅವರ ವಿವಾಹ ಒಂದು ವಿಧದಲ್ಲಿ ಪ್ರೇಮ ವಿವಾಹವೂ ಹೌದು. ಪರಸ್ಪರರು ಮಾತ್ರ ಒಪ್ಪಿ ಒಬ್ಬರನ್ನೊಬ್ಬರು ಪತಿ ಪತ್ನಿಯರನ್ನಾಗಿ ಸ್ವೀಕರಿಸಿದ ವಿವಾಹ. ಶಕುಂತಲೆಯನ್ನು ಕೆಲಕಾಲ ಒಲಿಸಿ, ರಮಿಸಿ, ಅನುಭವಿಸಿ, ಕಾಲ ಕಳೆದ ರಾಜ ದುಷ್ಯಂತ ತನ್ನ ರಾಜ್ಯಕ್ಕೆ ಹಿಂತಿರುಗುತ್ತಾನೆ. ಮತ್ತೆ ತಾನಾಗಿ ತಾನು ಎಂದಿಗೂ ಅವಳ ಬಗ್ಗೆ ಚಿಂತಿಸುವುದಿಲ್ಲ.

ದುಷ್ಯಂತನಿಗೆ ಗರ್ಭವತಿಯಾದ ಶಕುಂತಲೆ, ತನ್ನವರೊಂದಿಗೆ ದುಷ್ಯಂತನ ಬಳಿ ಹೋಗುತ್ತಾಳೆ. ದುಷ್ಯಂತ ಶಕುಂತಲೆ ತನ್ನ ಹೆಂಡತಿ ಎಂಬುದನ್ನೂ ಅವಳ ಗರ್ಭದಲ್ಲಿರುವ ಮಗು ತನ್ನದೆಂಬುದನ್ನೂ ನಿರಾಕರಿಸುತ್ತಾನೆ. "ನೀನು ನನ್ನ ಹೆಂಡತಿಯೇ ಎನ್ನಲು, ನಿನ್ನ ಗರ್ಭದಲ್ಲಿರುವ ಮಗುವಿನ ತಂದೆ ನಾನೇ ಎನ್ನಲು ಸಾಕ್ಷಿ ಏನಿದೆ?" ಎಂದು ಕೇಳುತ್ತಾನೆ.

ಮಹಾಭಾರತದ ಶಕುಂತಲೆ ಸಬಲೆ - ಕಣ್ವರ ಆಶ್ರಮದಲ್ಲಿ ಬೆಳೆದವಳು. ಧೈರ್ಯವಾಗಿ ದುಷ್ಯಂತನಿಗೆ ಹೇಳುತ್ತಾಳೆ 'ಮಹಾರಾಜ, ಮನುಷ್ಯ ತಾನೇನಾದರೂ ಒಂದು ಕೆಲಸವನ್ನು ಮಾಡಿದ್ದೇ ಆದರೆ ಅದಕ್ಕೆ ಏಳೇಳು - ಹದಿನಾಲ್ಕು ಸಾಕ್ಷಿಗಳಿರುತ್ತಾರೆ ಎನ್ನುವುದನ್ನು ನೀನು ಮರೆಯಬೇಡ 'ಆದಿತ್ಯ ಚಂದ್ರಾ, ಅನಿಲ್ ಅನಲಶ್ಚ ದ್ಯೌ ಭೂಮಿರಾಪೌ ಹೃದಯಂ ಯಮಶ್ಚ ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ, ಧರ್ಮಶ್ಚ ಜಾನಾತಿ ನರಸ್ಯ ವೃತ್ತಂ".

"ಮನುಷ್ಯನ ಒಂದು ಕೆಲಸವನ್ನು ಮಾಡಿದ್ದೇ ಆದರೆ, ಅದಕ್ಕೆ ಸೂರ್ಯ ಚಂದ್ರರು, ಆಕಾಶ, ಗಾಳಿ ಬೆಂಕಿಗಳು, ಭೂಮಿ-ಜಲಗಳು, ಆ ಕೆಲಸವನ್ನು ಮಾಡಿದವನ ಹೃದಯ, ಒಂದು ವೇಳೆ ಮಾಡಿದ ಕೆಲಸ ನೀತಿ ಬಾಹಿರವಾದುದಾದರೆ, ಅದನ್ನು ಶಿಕ್ಷಿಸುವ ಯಮ, ಆ ಕೆಲಸವನ್ನು ಹಗಲಿನಲ್ಲಿ ಮಾಡಿದ್ದೇ ಆದರೆ ಹಗಲು, ರಾತ್ರಿಯಲ್ಲಿ ಮಾಡಿದ್ದರೆ ರಾತ್ರಿ ಅವೆರಡೂ ಅಲ್ಲದ ಸಮಯದಲ್ಲಿ ಆ ಕೆಲಸ ಮಾಡಿದ್ದಾದರೆ, ಸಂಧ್ಯಾಕಾಲ, ಹಾಗೂ ಮಾಡಿದ ಕೆಲಸ ನೀತಿಯುತ ಕೆಲಸವಾದುದಾದರೆ ಧರ್ಮದೇವತೆ, ಇವರೆಲ್ಲಾ ಸಾಕ್ಷಿ" ಎಂದು ಹೇಳುತ್ತಾಳೆ.

ಶಕುಂತಲೆ ಹೇಳಿದ ಈ ಶ್ಲೋಕದಲ್ಲಿ ಸೂರ್ಯ, ಚಂದ್ರ, ಗಾಳಿ, ಬೆಂಕಿ, ಆಕಾಶ ಭೂಮಿ ನೀರು ಯಮ, ಹಗಲು, ರಾತ್ರಿ ಸಂಧ್ಯಾ ಕಾಲಗಳು ಮತ್ತು ಧರ್ಮಕ್ಕೆ ಮನುಷ್ಯನ ಹೃದಯದ (ಅಂತರಾಳದ) ವೃತ್ತಾಂತವೂ ತಿಳಿದಿರುತ್ತದೆ ಎಂಬ ಅರ್ಥವೂ ಅಡಗಿದೆ.

ಮಹಾಭಾರತದ ಶಕುಂತಲೆಯ ಈ ದನಿಯಲ್ಲಿ, ತಾನು ಮಾಡಿದ್ದು ಧರ್ಮ ಕಾರ್ಯ ನೀತಿಯುತವಾದ ಕಾರ್ಯ ಎಂಬ ಧ್ಯೇಯದ, ದುಷ್ಯಂತನು ಮಾಡಿದ - ಮಾಡುತ್ತಿರುವ ಕಾರ್ಯ, ಅನೀತಿಯುತವಾದ, ಹಾಗೂ ಯಮುನ ಸಾಕ್ಷಿಯನ್ನು ಎದುರಿಸಬೇಕಾದ ಕಾರ್ಯ ಎಂದು ಅಳುಕದೆ ತಿಳಿಸುವ ಹೆಣ್ಣಿನ ದಿಟ್ಟತನದ ಛಾಯೆಯನ್ನು ನಾವು ಕಾಣಬಹುದು. ಮುಂದೆ, ಶಕುಂತಲೆ - ದುಷ್ಯಂತ - ಮಗ ಭರತ ಒಂದೇ ಕಡೆ ಭೇಟಿಯಾದಾಗ, ಮಗ ತಾಯಿ ಶಕುಂತಲೆಗೆ, ತಂದೆ ದುಷ್ಯಂತನನ್ನು ತೋರಿಸಿ, ಅಮ್ಮಾ ಇವನು ಯಾರು? ಎಂದು ಕೇಳಿದಾಗ, ಶಕುಂತಲೆ, "ಇವನು ನಿನ್ನ ತಂದೆ", ಎಂದಾಗಲೀ, "ನಿನ್ನ ಹುಟ್ಟಿಸಿದವನು" ಎಂದಾಗಲೀ ಹೇಳುವುದಿಲ್ಲ. ಆದರೆ ಮಗನಿಗೆ. "ನಿನ್ನ ವಿಧಿಯನ್ನು ಕೇಳು ಹೋಗು" ಎನ್ನುತ್ತಾಳೆ. ಇವೆಲ್ಲಾ ಸಾವಿರಾರು ವರ್ಷಗಳ ಹಿಂದಿನ ಪರಿಸ್ಥಿತಿ.

ಆದರೂ ಇಲ್ಲಿ ಸಂತೋಷ ಪಡಬೇಕಾದ ವಿಚಾರವೆಂದರೆ, ದುಷ್ಯಂತ ಶಕುಂತಲೆಯನ್ನು ಹೆಂಡತಿ ಎಂದು ಒಪ್ಪದೇ ಹೋದರೂ, ಆಕೆಗೆ ಪ್ರಸವವಾಗುವರೆಗೆ, ಆಕೆಗೆ ಸುರಕ್ಷಣೆಯನ್ನು ಕೊಡಲು, ಆಕೆಗೆ ಹುಟ್ಟುವ ಮಗು ಚಕ್ರವರ್ತಿಯ ಲಕ್ಷಣವುಳ್ಳ ಮಗುವಾದರೆ ಆಕೆಯನ್ನು ತಾನು ಸ್ವೀಕರಿಸಬೇಕಾಗುವುದು ಎಂಬುವ ವಿಚಾರವನ್ನು ಒಪ್ಪುತ್ತಾನೆ. ಕನಿಷ್ಟ ಪಕ್ಷ ಆ ದಿನಗಳಲ್ಲಿ ಒಬ್ಬ ಹೆಣ್ಣು ತಾನು ಇಂತಹವನ ಹೆಂಡತಿ ಎಂದು ಹೇಳಿಕೊಂಡು ಬಂದಾಗ, ಸಂಬಂಧವನ್ನು ಅಲ್ಲಗಳೆದ ವ್ಯಕ್ತಿ ಆ ವಿಷಯ ತೀರ್ಮಾನವಾಗುವವರೆಗೆ, ಆಕೆಯನ್ನು ಪೋಷಿಸಬೇಕು, ರಕ್ಷಿಸಬೇಕು ಎಂಬ ಒಂದು ಪದ್ಧತಿ ಇತ್ತು ಎಂಬುದು. ಶಕುಂತಲೆಯಂತಹ, ತಮ್ಮ ಮದುವೆಗೆ ಯಾವುದೇ ಸಾಕ್ಷಿಯಿಲ್ಲದ ಒಬ್ಬನ ಹೆಂಡತಿಯಾದ ಹೆಣ್ಣು/ಗಳ ಸಂಖ್ಯೆ ಲೆಕ್ಕವಿಲ್ಲದಷ್ಟಿದೆ. ಮದುವೆಗೇ ಇಲ್ಲದ ಸಾಕ್ಷಿಯನ್ನು ಮಕ್ಕಳ ತಂದೆ ಯಾರು ಎನ್ನುವುದಕ್ಕೆ ಎಲ್ಲಿಂದ ತಂದಾರು? ನನ್ನ ತಂದೆ ಯಾರು ಎಂದು ಭರತನಂತಹ ಒಂದು ಮಗು ಕೇಳಿದರೆ, "ಕಾನೂನು ಕೇಳು ಹೋಗು" ಎನ್ನುತ್ತಾಳೇನೋ?

1) ಸಾಕ್ಷಿ ಉಳಿಸದೆ ಮದುವೆ ಆಗಿ, ಗರ್ಭವತಿಯನ್ನಾಗಿ ಮಾಡಿ ಮಾಯವಾದ ಗಂಡಿನ ವಿರುದ್ಧ.

2) ಮದುವೆ ಆಗಿ ಹಲವಾರು ವರ್ಷ ಒಟ್ಟಾಗಿದ್ದು ಮಕ್ಕಳನ್ನು ಹುಟ್ಟಿಸಿ, ಅವರು ದೊಡ್ಡವರಾದ ಮೇಲೆ ಈ ಹೆಂಡತಿಯನ್ನು ಬಿಟ್ಟು ಬೇರೊಬ್ಬಳ ಹಿಂದೆ ಹೋದ ಗಂಡನ ವಿರುದ್ಧ, ತಮ್ಮನ್ನು, ತಮ್ಮ ಮಕ್ಕಳನ್ನು ಪೋಷಿಸಲು

ಅಸಹಾಯಕರಾದ ಸ್ತ್ರೀಯರು ಮಾನ್ಯ ನ್ಯಾಯಾಲಯಗಳಲ್ಲಿ ಜೀವನಾಂಶಕ್ಕಾಗಿ ಅರ್ಜಿಯನ್ನೋ, ದಾವೆಯನ್ನೋ ಹಾಕಿ ಕೊಂಡರೆ, ಗಂಡನಾದವನು ತನ್ನ ತಕರಾರಿನಲ್ಲಿ ಸಲಿಸುವ ಮುಖ್ಯವಾದ ಅಂಶ

1) ಇವಳು ನನ್ನ ಹೆಂಡತಿಯೇ ಅಲ್ಲ. ಈ ಮಕ್ಕಳು ನನ್ನ ಮಕ್ಕಳೇ ಅಲ್ಲ

2) ಕೆಲವು ಸನ್ನಿವೇಶಗಳಲ್ಲಿ ಮದುವೆಗೆ ಸಾಕಷ್ಟು ಸಾಕ್ಷಿ-ಪುರಾವೆಗಳಿವೆ .ಎಂದು ತಿಳಿದುಕೊಂಡು, ಇವಳು ನನ್ನ ಹೆಂಡತಿಯೇ ನಿಜ ಆದರೆ ಈ ಮಕ್ಕಳು ನನಗೆ ಹುಟ್ಟಿದವಲ್ಲ ಈಕೆ ನಡತೆ ಕೆಟ್ಟವಳು ಆದ್ದರಿಂದ ಜೀವನಾಂಶ ಕೊಡಬೇಕಾಗಿಲ್ಲ

ಇವನು ನನ್ನ ಗಂಡ ಎನ್ನಲು, ಈ ಮಕ್ಕಳು ಇವನಿಗೂ ನನಗೂ ಹುಟ್ಟಿದ ಮಕ್ಕಳು, ಎನ್ನಲು ಸಾಕ್ಷಿಯನ್ನು ಎಲ್ಲಿಂದ ಹಳ್ಳಿಗಾಡಿನ ಹೆಣ್ಣೊಬ್ಬಳು ತರುವುದು? ಒಂದು ವೇಳೆ ಇವನು ನನ್ನ ಗಂಡ ಎನ್ನಲು ಸಾಕ್ಷಿ ಸಿಕ್ಕ ಬಹುದಾದರೂ, ಗರ್ಭದಲ್ಲಿರುವ ಮಗು ಇವನದೇ ಎನ್ನಲು, ಹೊರ ಬಂದ ಮಗು ಇವನದೇ ಎನ್ನಲು ಇವಳು ಎಲ್ಲಿಂದ ಸಾಕ್ಷಿ ತರುವುದು. ಶಕುಂತಲೆ ಸಾವಿರಾರು ವರ್ಷಗಳ ಹಿಂದೆ ಹೇಳಿದ ಸಾಕ್ಷಿಗಳೇ ಈವತ್ತಿನ ಹೆಣ್ಣಿಗೂ ಇರುವ ಸಾಕ್ಷಿ ಎನ್ನುವುದು ನ್ಯಾಯ ದೇವತೆಯ ಹೃದಯಕ್ಕೆ ತಿಳಿದ ನಗ್ನ ಸತ್ಯ. ಮನಸ್ಸು ಮಾಡಿದರೆ ಸಾಕ್ಷಿಯಿಲ್ಲದೆ. ಮದುವೆ ಆಗಬಹುದು, ಸಾಕ್ಷಿ ಸಿಗದಂತೆ ಮಗು ಹುಟ್ಟಿಸಬಹುದು. ಶಕುಂತಲೆ ಹೇಳಿದ 'ಹೃದಯ-ಯಮ-ಧರ್ಮ'ವನ್ನು ಇಂದಿನ ಹೆಣ್ಣು ಕಾನೂನಿನಲ್ಲಿ ಮಾನ್ಯ ನ್ಯಾಯಾಲಯಗಳಲ್ಲಿ ಕಾಣಬಯಸುತ್ತಾಳೆ. ಹಾಗೂ ಹೀಗೂ ಆ ನಂಬಿಕೆಯಿಂದ. ಪಡಬಾರದ ಕಷ್ಟ- ಪ್ರಯತ್ನ ಪಟ್ಟು 'ನಾನು ಇವನ ಹೆಂಡತಿ. ಈ ಮಗು ಇವನಿಂದ ನನಗೆ ಹುಟ್ಟಿದ ಮಗು' ಎಂದು ಸಾಬೀತು ಪಡಿಸಿ, ಮಾನ್ಯ ನ್ಯಾಯಾಲಯದಿಂದ, ಜೀವನಾಂಶಕ್ಕೆ ಒಂದು ತೀರ್ಪನ್ನು ಪಡೆದರೆ, ಆ ತೀರ್ಪಿನಂತೆ ಗಂಡನಾದವನು ನಡೆದುಕೊಳ್ಳುತ್ತಿದ್ದಾನೆಯೇ? ಜೀವನಾಂಶದ ವಸೂಲಾತಿಗಾಗಿ ಹಾಕುವ ಅರ್ಜಿಗಳಲ್ಲಿ ನ್ಯಾಯಾಲಯದಿಂದ ಸಮನ್ಸ್/ ನೋಟೀಸೇ ಅವನಿಗೆ ಜಾರಿ ಆಗುವುದಿಲ್ಲ. ಅವು ವಿಳಾಸದಲ್ಲಿಲ್ಲ -ಜಾರಿಯ ಸಮಯದಲ್ಲಿ ಗೈರು ಹಾಜರೀ, ವಿಳಾಸ ಸರಿ ಇಲ್ಲ ಇನ್ನೂ ಎಷ್ಟೆಷ್ಟೋ ಸಬ್ ಇನ್‌ಸ್ಪೆಕ್ಟರ್, ಸರ್ಕಲ್ ಇನ್‌ಸ್ಪೆಕ್ಟರ್, ಡಿ.ಎಸ್.ಪಿ. ಯಾರ ಮೂಲಕವೂ ಜಾರಿ ಆಗುವುದೇ ಇಲ್ಲ. ಎಷ್ಟೋ ಬಾರಿ ಅರ್ಜಿದಾರಳು ಎದುರುದಾರನ ಸರಿಯಾದ ವಿಳಾಸ ಕೊಡುವ ಕ್ರಮದಲ್ಲಿ ವಿಫಲಳಾಗಿದ್ದಾಳೆಂದು .ಅವಳ ಅರ್ಜಿಯೂ ವಜಾವಾಗುತ್ತದೆ.

ಜೀವನಾಂಶದ ಕೇಸಿನಲ್ಲಿ ಜಾರಿಯಾದ ಅವನ ಖಾಯಂ ವಿಳಾಸ ಏಕಾಏಕಿ. ಅಮಲ್ಜಾರಿಯ ಸಮಯದಲ್ಲಿ ತಪ್ಪಾಗಿ ಬಿಡುತ್ತದೆ. ತೀರ್ಪಿನ ದಿವಸವೂ ಮಾನ್ಯ ನ್ಯಾಯಾಲಯಕ್ಕೆ ಹಾಜರಾಗಿದ್ದಂತಹ ಗಂಡ ಇದ್ದಕಿದ್ದಂತೆ ತೆರೆಯಿಂದ ಮರೆಯಾಗುತ್ತಾನೆ, ಮಾಯವಾಗುತ್ತಾನೆ, ಕಳ್ಳತನವಾಯಿತು ಎಂದು ದೂರು ಕೊಟ್ಟರೆ, ಕಳ್ಳನ ಹೆಸರು ವಿಳಾಸ ಇಲ್ಲದಿದ್ದರೂ ಹಿಡಿದು ತರುವ ಪೋಲಿಸರು, ಕೊಲೆಗಾರರನ್ನು ಹಿಡಿದು ತರುವ ಪೋಲೀಸರು. ಖಚಿತ ಹೆಸರು ವಿಳಾಸ ಇರುವವರನ್ನು ಒಂದೇ ಹೀರಿಂಗಿಗೆ ಯಾಕೆ ಹಾಜರು ಪಡಿಸುವುದಿಲ್ಲ? ಎಂಬ ಕಕ್ಷಿದಾರಳ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟ, ಆಶ್ಚರ್ಯವೆಂದರೆ ಹಲವಾರು ಕೇಸುಗಳಲ್ಲಿ ಗಂಡನಾದವನು ಸರ್ಕಾರೀ ಕೆಲಸದಲ್ಲೋ, ಬ್ಯಾಂಕಿನ ಕೆಲಸದಲ್ಲೋ ದೊಡ್ಡ ಕಂಪನಿಯ ಕೆಲಸದಲ್ಲೋ ಇರುವವನಾಗಿರುತ್ತಾನೆ. ಹಲವಾರು ಗಣ್ಯ ಗಂಡಂದಿರು ತಾವೇ ಸೆಲ್ಫ್ ಸ್ಯಾಲರೀ ಡ್ರಾಯಿಂಗ್ ಆಫೀಸರುಗಳಾಗಿರುತ್ತಾರೆ. ಕೆಲವರು ನೆಪ ಮಾತ್ರಕ್ಕೆ ಒಂದೆರಡು ತಿಂಗಳು ಜೀವನಾಂಶ ಕಟ್ಟಿ ಮತ್ತೆ ಸುಮ್ಮನಾಗುತ್ತಾರೆ. ಮತ್ತೆ ಅರೆಸ್ಟ್ ನೋಟೀಸು ಅಥವಾ ಅರೆಸ್ಟ್ ವಾರೆಂಟ್ ಹೋದಾಗಲೇ ಮತ್ತಷ್ಟು ಹಣ ಕಟ್ಟುವುದು. ಅದರಲ್ಲೂ ಕಂತು-ಕಂತೇ. "ಅಮ್ಮಾ ಕೇಸು ಗೆದ್ದಿದ್ದೇನೆ - ಗೆದ್ದಿದ್ದೇನೆ ಎಂದು ಮೂರು ವರ್ಷಗಳಿಂದ ಹೇಳುತ್ತಲೇ ಇದ್ದೀರಿ. ನನಗೆ ಆ ಗೆದ್ದಿರುವ ತೀರ್ಪಿನ ಪೇಪರ್ ಬೇಡಮ್ಮಾ - ನನಗೆ ಒಂದು ಹೊತ್ತು ಊಟಕ್ಕೆ ದುಡ್ಡು ಕೊಡಿಸಿ ಅವನಿಗೆ ಹತ್ತು ಸಾವಿರ ಸಂಬಳ ಬರ್ತಾಯಿದೆ" ಎಂದು ನೊಂದು ಕಕ್ಷಿದಾರಳು ಹೇಳಿದಾಗ ಚಪ್ಪಲಿ ಏಟಿನ ಅನುಭವವಾಗುತ್ತದೆ.

ವಕೀಲರು ಕಕ್ಷಿಗಾರಳ ಮುಂದೆ ಸೋಲನೊಪ್ಪ ಬೇಕಾಗುತ್ತದೆ. ಜೀವನಾಂಶದ ಕಾನೂನು ಈಗಾಗಲೇ ಇದೆ. ನ್ಯಾಯಾಲಯದ ತೀರ್ಪಿನ ನಂತರವೂ ಒಬ್ಬ ಗಂಡನಾದವನು ಹೆಂಡತಿಗೆ ಜೀವನಾಂಶ ಕೊಡದೇ ಕೆಲಸದಲ್ಲಿ ಮುಂದುವರಿಯಲು... ತಾನೊಬ್ಬ, ಉಂಡು ತೇಗಿ, ಬೇಕಾದರೆ ಇನ್ನೊಬ್ಬಳ ಜೊತೆ ಇರಲೂ ಸಾಧ್ಯವಾಗುತ್ತಿರುವುದು ಏಕೆ? ಹೇಗೆ. ಕೆಲಸದಿಂದ (ಅದು ಸರ್ಕಾರಿ ಕೆಲಸವಾಗಲೀ, ಬೇರೆ ಖಾಸಗಿ ಕೆಲಸವಾಗಲೀ) ಅವರನ್ನು ತಕ್ಷಣ ಅನಾಮತ್ತು ಪಡಿಸಬಾರದೇಕೆ? ಜೀವನಾಂಶದ ಡಿಕ್ರೀ ಆದ ನಂತರ ಗಂಡನಾದನಿಗೆ ಸಮನ್ಸು / ನೋಟೀಸು ಜಾರಿ ಆಗದೇ ಹೋದರೆ, ಸರ್ಕಾರ ತನ್ನ ಆಪದ್ಧನದಿಂದ ಆ ಹೆಣ್ಣಿಗೆ ಆ ಮಕ್ಕಳಿಗೆ, ಹಣವನ್ನು ಕಟ್ಟಿ ಆ ನಂತರ ಅವನು ಸಿಕ್ಕಾಗ ಅವನಿಂದ ಕಾನೂನು ರೀತ್ಯಾ ವಸೂಲು ಮಾಡಬಾರದೇಕೆ? ಜೀವನಾಂಶದ ಅಮಲ್ಜಾರಿಯ ವಿಷಯದಲ್ಲಿ ಸಮನ್ಸು / ನೋಟೀಸು ಇತ್ಯಾದಿ ಕ್ರಮಗಳ ಜವಾಬ್ದಾರಿ ಸರ್ಕಾರದ್ದೇ ಆಗಬಾರದೇಕೆ?

**CPMG/KA/BG-8/2003-05** **RNI No. 45577/88**

***Posted at Basavanagudi P.O. On the 25th of every Month***

ಭಾರಿ ಉದ್ಯೋಗದಲ್ಲಿರುವ ಗಂಡ, ಹೆಂಡತಿಯನ್ನು ಹೆಂಡತಿಯೇ ಅಲ್ಲ, ಮಗನನ್ನು ತನ್ನ ಮಗನೇ ಎಂದೆಲ್ಲಾ ಹೇಳಿ, ಕೊನೆಗೆ ನ್ಯಾಯಾಲಯ, ಇವಳು ನನ್ನ ಹೆಂಡತಿಯೇ, ಇವನು ನಿನ್ನ ಮಗನೇ, ಆದ್ದರಿಂದ ಜೀವನಾಂಶ ಕೊಡು ಎಂದು ತಿಂಗಳಿಗೆ ಸೇರಿ 1000 ರೂಪಾಯಿ ಕೊಡುವಂತೆ ಆದೇಶ ಮಾಡಿದರೆ, ಅದನ್ನು ಕೊಡುತ್ತಾ ಬಂದು, ಒಮ್ಮೆಲೇ ನನ್ನ ಹೆಂಡತಿ, ನನ್ನೊಂದಿಗೆ ಬಂದು ಜೀವನ ಮಾಡುತ್ತಿಲ್ಲ ಆದ್ದರಿಂದ ನನಗೆ ಅವಳಿಂದ ವಿಚ್ಛೇದನ ಕೊಡಿ ಎಂದು ಅರ್ಜಿ ಹಾಕುವುದೂ ಇದೆ. ತನ್ನ ಶೀಲವನ್ನು ಸಂಶಯಿಸಿದ ವ್ಯಕ್ತಿಯೊಂದಿಗೆ, ಹೆಂಡತಿಯೇ ಅಲ್ಲ ಎಂದವನಿಗೆ, ಕೋರ್ಟು ಇವಳು ನಿನ್ನ ಹೆಂಡತಿ ಎಂದ ಮೇಲೆ, ಮನಸ್ಸಿಲ್ಲದೆ ಒಪ್ಪಿದವನ ಮನೆಗೆ ಒಂದು ಹೆಣ್ಣು ಹೇಗೆ ಹೋಗಲು ಸಾಧ್ಯ? ಹಾಗಾದರೆ ಅವನಿಗೆ ವಿಚ್ಛೇದನ ಕೊಡಲು ಇವಳಿಗೇನು ತೊಂದರೆ ಎನಿಸುವುದು ಸಹಜ. ಈ ವಿಚ್ಛೇದನ ಅವನಿಗೆ, ಇನ್ನೊಂದು ಮದುವೆ ಆಗಲು ರಹದಾರಿ ಅಷ್ಟೇ.

ಹೆಂಡತಿ-ಮಕ್ಕಳ ಸಂಬಂದವನ್ನು ನಿರಾಕರಿಸಿದ ವ್ಯಕ್ತಿ ವಿಚ್ಛೇದನವನ್ನು ಕೇಳುವ ಅಧಿಕಾರವನ್ನು ಕಳೆದುಕೊಳ್ಳುತ್ತಾನೆ ಎಂಬ ಕಾನೂನು ಬರುವುದು ಯಾವಾಗ? ಸಂಬಂದವನ್ನು ನಿರಾಕರಿಸಿದ ಮೇಲೆ, ಒಂದು ವೇಳೆ ಸಂಬಂದ ಮಾನ್ಯ ನ್ಯಾಯಾಲಯದಲ್ಲಿ ಸಾಬೀತಾದರೆ, ಸಂಬಂಧವನ್ನು ಅಲ್ಲಗಳೆದ ವ್ಯಕ್ತಿಗೆ ಕಠಿಣ ಶಿಕ್ಷೆ ಎಂಬ ಕಾನೂನು ಬರುವುದು ಯಾವಾಗ? ಎಚ್ಚರಿಕೆ ವಹಿಸಿ ಸಾಕ್ಷಿ ಆಧಾರಗಳೊಂದಿಗೆ ಮದುವೆ ಆಗಲು, ಮಕ್ಕಳನ್ನು ಹೆರಲು ಮುಂದಿನ ಜನಾಂಗಕ್ಕೆ, ಈಗಿನ ಅಪ್ರಾಪ್ತ ವಯಸ್ಕರಿಗೆ ತಿಳಿಸಬಹುದಾದರೂ, ಈಗಾಗಲೇ ಮದುವೆ ಆಗಿರುವ, ಮಕ್ಕಳ ತಾಯಿ ಆಗಿರುವ ಹಳ್ಳಿಗಾಡಿನ ಮುಗ್ಧ ಹೆಣ್ಣುಗಳ ಗತಿ ಏನು?

ಶಕುಂತಲೆಯ ಮಗ ಭರತನ ಹೆಸರನ್ನು ನಮ್ಮ ಭಾರತಕ್ಕೆ ಇಷ್ಟಮಾತ್ರಕ್ಕೆ, ನಮ್ಮ ದೇಶದ ಎಲ್ಲ ಹೆಣ್ಣುಗಳೂ ಶಕುಂತಲೆಯ ಶೋಕವನ್ನು ಇನ್ನೂ ಅನುಭವಿಸ ಬೇಕೆ?

ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಬೇಕಿದೆ.

★

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri